ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೬ ಸೆಪ್ಟೆಂಬರ್ ೨೦೧೦ ಸಂಚಿಕೆ : ೯



ನೂತನ ಸಂಪುಟ ದರ್ಜೆ ಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿದ ಶ್ರೀ ವಿ. ಸೋಮಣ್ಣನವರು ಕುಟುಂಬ ಸಮೇತರಾಗಿ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಸಂಸದ ಶ್ರೀ ಜಿ.ಎಸ್ ಬಸವರಾಜು, ಶ್ರೀ ಭೀಮಣ್ಣ ಖಂಡ್ರೆ, ಶ್ರೀ ಬಿ.ಎಸ್. ಪುಟ್ಟರಾಜು ಮೊದಲಾದ ಗಣ್ಯರು ಹಾಜರಿದ್ದರು



ತಿಗಳ ಜನಾಂಗದ ವತಿಯಿಂದ ತುಮಕೂರಿನಲ್ಲಿ ಏರ್ಪಡಿಸಿದ್ದ ಪೂಜ್ಯ ಶ್ರೀಗಳವರ ಗುರುವಂದನ ಸಮಾರಂಭದಲ್ಲಿ ಜಗದ್ಗುರು ಶ್ರೀ ಶ್ರೀ ಜ್ಞಾನಾನಂದಪುರಿ ಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು. ಸಮಾರಂಭದಲ್ಲಿ ಸುತ್ತೂರು ಜಗದ್ಗುರುಗಳು, ಶ್ರೀ ಸಿದ್ಧೇಶ್ವರಸ್ವಾಮಿಗಳು ಉಪಸ್ಥಿತರಿದ್ದರು



ಇನ್ಫೋಸಿಸ್ ವತಿಯಿಂದ ಶ್ರೀಮಠಕ್ಕೆ ಕೊಡುಗೆಯಾಗಿ ನೀಡಿದ ಕಂಪ್ಯೂಟರ್‌ಗಳನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಶ್ರೀ ರಾಮರತಿನಂ ತೇಲರತಿನಂ ಅವರಿಂದ ಸ್ವೀಕರಿಸಿದರು. ಈ ಸಂದರ್ಭದಲ್ಲಿ ಡಾ. ರಮೇಶ್ ಭಟ್, ಶ್ರೀ ನಾಗೇಶ್‌ಕುಮಾರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೬ ಸೆಪ್ಟೆಂಬರ್ ೨೦೧೦ ಸಂಚಿಕೆ : ೯


ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ



ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ ..............




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಶಿಕ್ಷಕರ ದಿನಾಚರಣೆ

ಸೆಪ್ಟೆಂಬರ್ ಐದು ಒಂದು ಮಹತ್ವದ ಸ್ಮರಣೀಯ ದಿನ. ಶಿಕ್ಷಕರ ದಿನಾಚರಣೆ. ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ ಅವರು ಶಿಕ್ಷಕರಿಗೆ ತೋರಿಸಿದ ಅನನ್ಯ ಗೌರವ. ರಾಷ್ಟ್ರಪತಿ ಸ್ಥಾನದಲ್ಲಿದ್ದೂ ತನಗೆ ಅಕ್ಷರ ಕಲಿಸಿದ ಶಿಕ್ಷಕರನ್ನು ತುಂಬು ಹೃದಯದಿಂದ ಸ್ಮರಿಸುವ ಮೂಲಕ, ತಮ್ಮ ಹುಟ್ಟುಹಬ್ಬವನ್ನು ಆಚರಿಸಿಕೊಂಡು ಬಂದ ಅಪರೂಪದ ದಿನ. ಎಂಥ ಭಾಗ್ಯ ಶಿಕ್ಷಕರದು !

ಶಿಕ್ಷಕ ಸಮಾಜದ ರೂವಾರಿ. ಬದುಕಿನ ದೀಪಧಾರಿ. ಅವನಿಂದ ವ್ಯಕ್ತಿತ್ವಗಳ ಅನಾವರಣ. ಅವನಿಗೆ ಸರಿಸಮಾನರಿಲ್ಲ. ಶಿಕ್ಷಕ, ಉಪಾಧ್ಯಾಯ, ಅಧ್ಯಾಪಕ, ಗುರು, ಆಚಾರ್ಯ ಎಂಬ ಗೌರವ ಅವನಿಗೆ. **'ಗುರುಮುಟ್ಟದಗುಡ್ಡ'** ಎನ್ನುತ್ತದೆ ಜನಪದ. **'ಶಿವಪಥವನರಿವೊಡೆ ಗುರುಪಥವೇ ಮೊದಲು'** ಎನ್ನುತ್ತದೆ ಬಸವವಾಣಿ. ಗುರುವಿನ ಸಾರ್ಥಕತೆ ಶಿಷ್ಯನ ಅಭಿವೃದ್ಧಿಯಲ್ಲಿ, ಅಭ್ಯುದಯದಲ್ಲಿ. ಗುರು-ಶಿಷ್ಯರ ನಡುವಿನ ನೇಮವೇ ಪ್ರೀತಿ. ಆ ಪ್ರೀತಿ ಶಿವಮುಖವಾದುದು. ಸಚ್ಚಾರಿತ್ರ್ಯವಂತ ಶಿಕ್ಷಕ ಆತ್ಮ ಸಾಕ್ಷಿಯಾಗಿ ಬದುಕುತ್ತಾನೆ. ತನ್ನ ಬಳಿಗೆ ಬಂದ ಕಲಿವ **'ಮನಸ್ಸು'**ಗಳನ್ನು ಅರಳಿರುವ ಕಾಯಕವನ್ನೇ ತಾನು ಮಾಡುವ ಪೂಜೆ ಎಂದು ಭಾವಿಸುತ್ತಾನೆ. ಶಿಲೆಯನ್ನು ಶಿಲ್ಪವಾಗಿಸುವ ಕರ್ಮಯೋಗಿ ಶಿಕ್ಷಕ. ಅವನು **'ಉತ್ತು ಬಿತ್ತುವ ಮಂತ್ರ'** ಮಾನವೀಯತೆಯದಾಗಿರುತ್ತದೆ. ಪ್ರಜ್ಞಾಶೀಲನಾದ 'ಶಿಕ್ಷಕ' ಯಾವಾಗಲೂ ಜಾಗರವಿದ್ದು ಸಸಿಯ ಸಲಹುವ'ನಾಗಿರುತ್ತಾನೆ. ತನ್ನ ವೈಯಕ್ತಿಕ ಸುಖದುಃಖಗಳನ್ನು ಬೋಧನಾವಧಿಯಲ್ಲಿ ಮರೆತು ಸುಖಿಸುವ ಅದೃಷ್ಟವಂತನವನು. ತನಗರಿವಿಲ್ಲದಂತೆಯೇ ತನ್ನ ಬಳಿಗೆ ಬಂದ ವಿದ್ಯಾರ್ಥಿಗಳಿಗೆ ಸ್ಫೂರ್ತಿ ನೀಡುವ ಅವಕಾಶ ಅವನದಾಗಿರುತ್ತದೆ. **'ಹುಲಿನೆಕ್ಕಿ ಬದುಕುವ'** ಅಸೀಮ ಧೈರ್ಯ ಅವನದು.

ಇಂದು, ಶಿಕ್ಷಕ ಬಂಧುಗಳು ಆತ್ಮಾವಲೋಕನ ಮಾಡಿಕೊಳ್ಳುವ ದಿನ. ನಾನು ಎಷ್ಟರಮಟ್ಟಿಗೆ ಶಿಕ್ಷಕನಾಗಿದ್ದೇನೆ ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳಬೇಕಾದ ದಿನ. ಸಮಾಜ, ಸರ್ಕಾರ ತನಗೆ ಕೊಟ್ಟಿರುವ ಅವಕಾಶಗಳನ್ನು ಹೇಗೆ ಸದ್ಬಳಕೆ ಮಾಡಿಕೊಳ್ಳುತ್ತಿದ್ದೇನೆ? ಸದ್ವಿನಿಯೋಗ ಮುಖಿಯಾಗಿ ಹೆಜ್ಜೆ ಹಾಕುತ್ತಿದ್ದೇನೆ ಎಂದು ವಿಮರ್ಶೆ ಮಾಡಿಕೊಳ್ಳಬೇಕಾದ ದಿನ. ಅದೇ **ಡಾ॥ ರಾಧಾಕೃಷ್ಣನ್** ಅವರಿಗೆ ಶಿಕ್ಷಕರು ಸಲ್ಲಿಸಬೇಕಾದ ಗೌರವ.

ಶಿವಸ್ವರೂಪಿ ಶಿಕ್ಷಕರಿಗೆ **'ಸಿದ್ಧಗಂಗಾ'** ಹೃತ್ಪೂರ್ವಕ ವಂದನೆಗಳನ್ನರ್ಪಿಸುತ್ತದೆ.

–ಸಂಪಾದಕ.







## ಸ್ತ್ರೀ ನೀತಿ ಸಂಹಿತೆ

*The stricter code of morality applied to women is really a compliment to them, for it accepts the natural superiority of the women. But the modern woman, if I may say si, is losing herself respect. She doesnot respect her own individuality and uniqueness, but is paying all unconcious tribute to mass by trying to 'initiate him. She is fast becoming masculine and mechanical. Adventurous persuits are leading her into conflict with her own inner nature -* ಎನ್ನುತ್ತಾರೆ **ಡಾ॥ ಎಸ್. ರಾಧಾಕೃಷ್ಣನ್.** ೧೯೨೭ರಲ್ಲಿ ಪ್ರಥಮ ಬಾರಿಗೆ ಪ್ರಕಾಶಗೊಳಿಸಿದ ತಮ್ಮ ಅತ್ಯುತ್ತಮ 'The Hindu view of life' – ಕೃತಿಯಲ್ಲಿ ಗ್ರಂಥದ ೮೯ನೇ ಪುಟದಲ್ಲಿ ಮುದ್ರಿತವಾಗಿರುವ ಈ ಮಾತುಗಳನ್ನು ನಮ್ಮ ಬಳಿಗೆ ಬಂದ ಅನೇಕ ಆಪ್ತರೊಡನೆ, ಚಿಂತಕರೊಡನೆ ಈ ನುಡಿಗಳ ಸದಭಿಪ್ರಾಯವನ್ನು ವ್ಯಕ್ತಪಡಿಸಿದ್ದೇವೆ. ಮನನ ಮಾಡಿಕೊಂಡಿದ್ದೇವೆ. ಆ ಆಪ್ತರ, ಚಿಂತಕರ ಅಭಿಪ್ರಾಯವನ್ನು ಕೇಳಿದ್ದೇವೆ. ಹಿಂದೂ ಧರ್ಮದ ಜೀವನ ದೃಷ್ಟಿ ಎಂತಹುದು? ಸ್ತ್ರೀಯ ವಿಚಾರದಲ್ಲಿ ಅವರ ಭಾವನೆ ಅದೆಷ್ಟು ಪವಿತ್ರವಾದುದು. ಸ್ತ್ರೀಗೆ ಅದು ನೀಡಿದ ನೀತಿ ಸಂಹಿತೆಯಿಂದಾಗಿ ಅವಳಿಗದೊಂದು ಗೌರವವನ್ನು ತಂದುಕೊಟ್ಟುದಾಗಿತ್ತು. ಅದರಿಂದಾಗಿ ಅವಳಿಗದು ನೈಜವಾದ ಶ್ರೇಷ್ಠಸ್ಥಾನವನ್ನೇ ದೊರಕಿಸಿದಂತಾಗಿತ್ತು. ಆದರೆ, ಆಧುನಿಕ ಹಿಂದೂ ಸ್ತ್ರೀಯನ್ನು ಕುರಿತು ಹೇಳುವುದಾದರೆ ಆ ಉನ್ನತ ಸ್ಥಾನವನ್ನು ಕಳೆದುಕೊಳ್ಳುತ್ತಿದ್ದಾಳೆ. ಅವಳೀಗ ತನ್ನ ವ್ಯಕ್ತಿತ್ವವನ್ನು ಮತ್ತು ಅದರ ಘನತೆಯನ್ನು ಉಳಿಸಿಕೊಳ್ಳಲಾರದ ಸ್ಥಿತಿಗೆ ಬರುತ್ತಿದ್ದಾಳೆ. ಪುರುಷನನ್ನು ಅನುಕರಿಸುವ ಹಾಗೂ ಅನುಸರಿಸುವ ಮಾರ್ಗದಲ್ಲಿ ಹೆಜ್ಜೆ ಹಾಕುತ್ತಿದ್ದು ತನ್ನತನವನ್ನೇ ಕಳೆದುಕೊಳ್ಳುವ ಯಾಂತ್ರಿಕ ಸ್ಥಿತಿಗೆ ತಲುಪಿದ್ದು ಅವಳ ಸಾಹಸ ಪ್ರವೃತ್ತಿಯಿಂದಾಗಿ ತನ್ನ ಸಹಜ, ಸ್ತ್ರೀತ್ವದಲ್ಲಿಯೇ ಸಂಘರ್ಷಕ್ಕೊಳಗಾಗಿ ತೊಳಲಾಟವನ್ನನುಭವಿಸುತ್ತಿದ್ದಾಳೆ. ನಿಸರ್ಗ ನೀಡಿರುವ ಮಹಾಶಕ್ತಿಯನ್ನು ಅರಿತು ಅನುಭವಿಸುವುದೇ ನಿಜವಾದ ಜೀವನವೆಂದು ತಿಳಿಯುವುದೊಳ್ಳೆಯದು. **'ಅಗ್ನಿಸುಡಲರಿಯುದೆ ಸುಳಿಯಲರಿಯದು; ವಾಯು ಸುಳಿಯಲರಿಯದೆ ಸುಡಲರಿಯದು'**– ಅಲ್ಲವೇ ? ಸ್ತ್ರೀಯಾಗಲಿ, ಪುರುಷನಾಗಲಿ ತನಗೆ ಪ್ರಸಾದಿಸಿರುವ ಶಕ್ತಿಯನ್ನರಿತು ಬಾಳಿದಾಗಲೇ ಜೀವನ ಸುಂದರ.

*

ಓಂ

# ಶ್ರೀ ಸಿದ್ಧಲಿಂಗೇಶ್ವರ ವಚನ

ಮೂರೊಂದಾದಕಿಚ್ಚು ಧರಣಿಯನೆಲ್ಲವ ಸುಡುವುದ
ಕಂಡೆನು
ಧರೆಯ ಮೇಲಣ ಮನುಜರು ಉರಿಯ ಬೀಜವ
ಪವನೆಗೆಯ ಮಾಡಿ
ಶರೀರವನಳಿದು ಸದಾಶಿವ ಸದಾಶಿವನಯೆನುತ್ತ
ಮನುಜತ್ವವನಳಿದು ದೇವನಾದುದ ಕಂಡು
ಇದ ಶಿವ ಜೀವೈಕ್ಯವೆಂದೆನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ತ್ರಿಪುಟಿ ಏಕವಾದ ಪೂರ್ಣಜ್ಞಾನವೆಂಬ ಚಿದಗ್ನಿಯು, ಶರಣರ ದೇಹಭಾವ ನಿವೃತ್ತಿಮಾಡಿ ತತ್ತ್ವಂ ಅಸಿಯೆಂಬು ದರಿಂದೇಕ ಸ್ವರೂಪವಾಗಿಪ್ಪದನು, ಜ್ಞಾನದೃಕ್ಕಿನಿಂದೆ ನಿದರ್ಶನ ವಾದನು. ಅಂತಪ್ಪ ಶರಣನ ತನುತ್ರಯ ಸಂಬಂಧವಾದ ಜೀವತ್ರಯಗಳು, ಚಿದಗ್ನಿ ಸ್ವರೂಪಾದಿಪ್ಪ ಪ್ರಾಣ ಭಾವಲಿಂಗಗಳ ನಳವಡಿಸಿಕೊಂಡು, ಕ್ರಿಯಾಜ್ಞಾನ ಭಾವಾಚಾರವಿಡಿದಾಚರಿಸುತ್ತ ಅಂಗ ಲಿಂಗವೆಂಬ ಖಂಡಿತ ಮೇರೆ ನಷ್ಟವಾಗಿ, ಶಿವೋಹಂ ಶಿವೋಹಂ ಎನ್ನುತ್ತ, ಜೀವನ ಜೀವಭಾವವ ನಿವೃತ್ತಿ ಮಾಡಿ, ಪರಶಿವ ಸ್ವರೂಪ ನೆಯ್ದಿಸಿದುದೆ ಜೀವಪರಮಸಮರಸೈಕ್ಯ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

# ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಶರಣಮೇಳವನಡೆಸಿ ಅರಿವಿನ ದೀಪ ಹೊಚ್ಚಿ
ಇರವಿನ ಮಹಿಮೆಯ ಸಾರಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಾತ್ರೆಯ ನಡೆಸಿದೆ ಯಾತ್ರೆಗೆ ಸಮವೆನಿಸಿ
ತೀರ್ಥಭಾವವ ನೆಲೆಗೊಳಿಸಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುಮುಟ್ಟಿ ಗುರುವಾದ ಅರಿವಿನ ಸಿರಿದೀಪ
ಪರಮ ದಾಸೋಹದ ಸಿರಿ ಶಿಖರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾನು ತಾನಾಗಿರುವ ಮುಗಿಲ ಮರೆಯ ಸೂರ್ಯ
ನೆಲದಮರೆಯ ದಿವ್ಯ ಶಿವನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಣುವಿನೊಳು ಅಣುವಾದೆ ಮಹತಿಯೊಳು ಮಹವಾದೆ
ಇಹದೆಲ್ಲ ಜೀವಿಗಳ ಪ್ರೀತಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಸುತ ನಾ ಬಂದೆ ಕರುಣಿಸಿ ನೀಕರೆದೆ
ದೊರೆಯೆ ಮಾನವ್ಯದವರ ಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಕಗಮ್ಯನೆ ಅರಿವಿಗಸಾಧ್ಯನೆ
ಅನುಪಮ ಚರಿತನೆ ವರಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯವಿರೋಧವ ಜೀವ ವಿರೋಧವ
ಜ್ಞಾನ ವಿರೋಧವ ನೀ ಸಹಿಸೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುತ್ತಿ ಸುಳಿವಮನವ ಕಟ್ಟಿ ನಿಲ್ಲಿಸು ಎನುವ
ಸತ್ಯ ಸಂಪನ್ನ ಶಿವಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ತಾನಳಿದು ತಾನುಳಿದು ತಾನು ತಾನಾಗಿರುವ'
ಶರಣ ಪರಂಪರೆಯ ನಿಜದೀತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಪ್ರೇಮ ಮತ್ತು ಭಕ್ತಿಗಳಿಂದ ಜಗತ್ತು ಸ್ವರ್ಗ *

–ಶ್ರೀ ಸಿದ್ದೇಶ್ವರ ಸ್ವಾಮೀಜಿ

ಇದು ಭಕ್ತಿಯೋಗ, ಮುಂಡಕ ಅನ್ನುವುದು ಒಂದು ಉಪನಿಷತ್. ಮನುಷ್ಯನ ಕ್ಲೇಶವನ್ನು ಕಳೆಯುವ ಕಲೆ ಇದರಲ್ಲಿದೆ. ಅದರಲ್ಲಿ ಒಂದು ಮಾತು –ಮನುಷ್ಯ ಅಮೃತ ನಾಗುವನು. ಅಮೃತ ಅಂದರೆ ಸವಿ. ಅದನ್ನು ಕುಡಿದ ಬಳಿಕ ಮತ್ತೇನನ್ನಾದರೂ ಕುಡಿಯುವ ಆಸೆಯೇ ಉಳಿಯುವುದಿಲ್ಲ. ಮನುಷ್ಯ ಯಾವಾಗ ಹೃದಯ-ಗ್ರಂಥಿ ಗಳಿಂದ ವಿಮುಕ್ತನಾಗುತ್ತಾನೆ, ಆಗ ಅಮೃತನಾಗುತ್ತಾನೆ. ಆಗ ನೋಟ, ಮಾತು ಎಲ್ಲಾ ಸವಿ. ಅವನ ಸಹವಾಸದಲ್ಲಿ ಇದ್ದವರೂ ಸವಿ ಆಗುತ್ತಾರೆ.

ವಸಂತ ಋತು ಅದ್ಭುತ ವಾತಾವರಣವನ್ನು ಉಂಟು ಮಾಡುತ್ತದೆ. ಹಾಗೆಯೇ, ಈ ಭಕ್ತಿ ಅನ್ನುವುದು ಒಂದು ವಸಂತ, ಹೃದಯ, ಗ್ರಂಥಿಗಳಿಂದ ಪಾರಾದಾಗ ಭಕ್ತಿ ಸೂಸುತ್ತದೆ. ಭಕ್ತಿ ಹೀಗೆ ಸೂಸಿದರೆ, ಜಗತ್ತು ನಲಿಯುತ್ತದೆ.

ತಲೆಯಲ್ಲಿರುವ ಚಿಂತೆ, ಅಪನಂಬಿಕೆ, ಸಂಶಯ, ಒಂದು ಬಗೆಯ ಕನಸು ಹಾಗೂ ಭಾವನೆಗಳು– ಇವೆಲ್ಲಾ ಗ್ರಂಥಿಗಳು. ಈ ಗ್ರಂಥಿಗಳು ನಮ್ಮಿಂದ ಹರಿದಾಗ, ನಾವು ವಿಮುಕ್ತರಾಗುತ್ತೇವೆ.

ಮನುಷ್ಯ ಎಲ್ಲರನ್ನು ತುಂಬಾ ಪ್ರೀತಿಸಿದರೆ ನಿಶ್ಚಿಂತ ನಾಗುತ್ತಾನೆ. ಎಲ್ಲರನ್ನು ಸ್ವಲ್ಪ ಸ್ವಲ್ಪ ಪ್ರೀತಿಸಿದರೆ ಸಂಚಿತ ನಾಗುತ್ತಾನೆ.

ಯುರೋಪ್‌ಖಂಡದಲ್ಲಿ, ಮೆಸೆಡೋನಿಯಾ ಒಂದು ದೇಶ. ಅಲ್ಲಿಯ ರಾಜ ಫಿಲಿಪ್ಸ್. ಆತನ ಮಗನಾದ ಮತ್ತು ಅರಿಸ್ಟೋಟಲ್‌ನ ಶಿಷ್ಯನಾದ ಅಲೆಕ್ಸಾಂಡರ್ ಇಡೀ ಜಗತ್ತನ್ನು ಗೆಲ್ಲಬೇಕೆಂದಿದ್ದ. ಆತ ಯುದ್ಧ ಮಾಡುತ್ತಾ ಮಾಡುತ್ತಾ ಭಾರತ ದೇಶಕ್ಕೆ ಬಂದ. ಇಲ್ಲಿ 'ಪೂರೂರವ' ರಾಜನನ್ನೂ ಸೋಲಿಸಿದ. ಕೊನೆಗೆ ಅವನಿಗೆ ದುಃಖವಾಯಿತು. ಏಕೆಂದರೆ ಅವನು ಯುದ್ಧ ಮಾಡಲು ಯಾವ ನೆಲವೂ ಉಳಿದಿರಲಿಲ್ಲ.

ಅಲೆಕ್ಸಾಂಡರ್ ಹಲವಾರು ದೇಶಗಳಿಂದ ಪ್ರಯಾಣ ಮಾಡುತ್ತಿದ್ದುದರಿಂದ, ತನ್ನ ಗುರುವಿಗಾಗಿ ಏನು ತರಬೇಕೆಂದು ತನ್ನ ಗುರುಗಳನ್ನು ಕೇಳಿದ್ದನು. ಭಾರತ ದೇಶದಿಂದ ಒಬ್ಬ ಸಂತನನ್ನು ಕರೆದು ತರಲು ಅರಿಸ್ಟೋಟಲ್ ಹೇಳಿದ್ದನು. Our country will become richer if you bring a saint to our country from India'.

ಅಲೆಕ್ಸಾಂಡರ್ ಭಾರತದೇಶದಲ್ಲಿ ಸಂತನಿಗಾಗಿ ವಿಚಾರಿಸಿ ದನು. ಸಿಂಧು ನದಿ ಹರಿಯುವಲ್ಲಿ ಒಬ್ಬ ಸಂತನಿರುತ್ತಾನೆಂದು ಜನರು ಹೇಳಿದರು. ಅಲೆಕ್ಸಾಂಡರ್ ಸಂತ ಇರುವಲ್ಲಿಗೆ ಹೋದನು. ಸೂರ್ಯನ ತೇಜ, ಆ ಸಂತನ ತೇಜಸ್ಸಿಗಿಂತ ಹೆಚ್ಚಿಲ್ಲ, ಹಾಗಿತ್ತು ಆ ಸಂತನ ತೇಜ.

ಅಲೆಕ್ಸಾಂಡರ್‌ನ ಸೇನಾಪತಿ ಸಂತನಿಗೆ ಹೇಳಿದನು 'ಜಗತ್ತನ್ನೇ ಗೆದ್ದ ಸಾಮ್ರಾಟ ನಿಮ್ಮ ದರುಶನಕ್ಕೆ ಬಂದಿದ್ದಾರೆ' ಸಂತ ನಕ್ಕ. ಹೇಳಿದ: 'ಆಯಿತಲ್ಲ ದರ್ಶನ, ಆತ ನನ್ನನ್ನು ನೋಡಿದ. ನಾನು ಆತನನ್ನು ನೋಡಿದೆ' ಆಗ ಅಲೆಕ್ಸಾಂಡರ್ ಹೇಳಿದ 'ನಾನು ಈ ಜಗತ್ತಿನ ಸಾಮ್ರಾಟ. ಇಲ್ಲಿಗೆ ಬಂದಿದ್ದೇನೆ'

ಸಂತ ಹೇಳಿದ 'ನಾಲ್ಕಾರು ಜನರನ್ನು ಕೊಂದರೆ ನೀನು ದೊರೆ ಹೇಗೆ ಆದೆ? ಈ ನೀರು, ಭೂಮಿಯನ್ನು ಕೇಳು, ಅವೆಲ್ಲಾ ಮೌನ'.

ಅಲೆಕ್ಸಾಂಡರ್‌ಗೆ ಗಾಬರಿಯಾಯಿತು. ಆದರೂ ಆ ಸಂತನಿಗೆ ಹೇಳಿದ 'ನಾನು ನಿನಗೆ ಏನೋ ಕೊಡಬೇಕೆಂದಿದ್ದೇನೆ. ನಾನು ನಿನಗೆ ರತ್ನಗಳನ್ನು ಕೊಡುತ್ತೇನೆ'.

ಸಂತ ಹೇಳಿದ 'ನನ್ನ ರತ್ನದ ಮುಂದೆ ನಿನ್ನದೇನು' ರಾಜ ಕೇಳಿದ 'ಅದು ಯಾವುದು? ನಿನ್ನ ರತ್ನ ಯಾವುದು'

ಸಂತ ಹೇಳಿದ 'ಅದನ್ನು ಹೊರಗೆ ಇಟ್ಟಿದ್ದೇನೆ. ಅದು ಸೂರ್ಯ, ಅದು ನನ್ನದಷ್ಟೇ ಅಲ್ಲ, ಅದು ನಿನ್ನದೂ ಹೌದು. ನಿನ್ನ ಕ್ಷುಲ್ಲಕ ರತ್ನಗಳು ನನ್ನ ರತ್ನದ ಮುಂದೆ ಏನೂ ಅಲ್ಲ'.

ರಾಜ–ನನ್ನ ಗುರುಗಳದು ಒಂದು ಕೇಳಿಕೆ. ನೀವು ನನ್ನ ದೇಶಕ್ಕೆ ಬರಬೇಕು.

* ಜ್ಞಾನಯೋಗಾಶ್ರಮ, ಬಿಜಾಪುರ.

ಸಂತ–ಯಾವ ದೇಶ? ನನ್ನ ದೇಶ ಈ ಭೂಮಂಡಲ. ನಿನ್ನದು ಮೆಸಡೋನಿಯಾ. ನನ್ನ ದೇಶದಲ್ಲಿಯೇ ನೀನಿರುವೆ. ನಾನು ನಿನ್ನ ದೇಶದಲ್ಲಿ ಇಲ್ಲ.

ರಾಜ– I have wasted my days, killed millions and gained nothing' 'ನಾನು ಇಡೀ ಜಗತ್ತನ್ನೇ ಗೆದ್ದೆ. ಆದರೆ ಈ ಮುದುಕ ನನ್ನನ್ನು ಯಾವ ಶಸ್ತ್ರ ಅಥವಾ ಮಂತ್ರ ಇಲ್ಲದೆ ಸೋಲ್ಲಿಸಿದ'

ಅಲೆಕ್ಸಾಂಡರ್ ನಿರಾಶನಾದ. 'ಹೋಗಬಹುದೇನು?' ಎಂದು ಕೇಳಿದ.

ಆಗ ಸಂತ ಹೇಳಿದ 'ಯಾರೂ ಏನೂ ತೆಗೆದುಕೊಂಡು ಹೋಗದೇ ಇರುವಾಗ, ನೀನೂ ಕೂಡ ಹಾಗೆಯೇ ಮಾಡ ಬಹುದಲ್ಲ'.

'ಯಾವ ಮನುಷ್ಯ ಕೈಚಾಚದೇ ಬದುಕುವನೋ ಅವನು ಶ್ರೇಷ್ಠ'

ಶಿಷ್ಯ ಕೇಳಿದ 'ಪ್ರೇಮದ ಸವಿ ಸವಿಯಲು ಯಾರಿಗೆ ಸಾಧ್ಯ?'

ಗುರು ಹೇಳಿದ 'The gates of the kingdom of love are always open for all' 'ಭಕ್ತಿಯ ಬಾಗಿಲುಗಳು ಎಲ್ಲರಿಗಾಗಿ ತೆರೆದಿವೆ. ಇಲ್ಲಿ ಧರ್ಮ, ಜಾತಿಗಳ ಭೇದ ಇಲ್ಲ. ಮರೆತಾಗ ಭಕ್ತಿ, ಅರಿತಾಗ ಬೇರೆ, ಬೇರೆ, ಭಕ್ತಿಯ ಸೌರಭ ನಮ್ಮನ್ನು ನಾವು ಮರೆತಾಗ ಹರಿಯುತ್ತದೆ.

ನಾವು ಧರ್ಮೀಯರು. ದೇವರನ್ನು ವಿಭಾಗಿಸಿದ್ದೇವೆ. ಪ್ರೇಮದ ಕೊರತೆಯಾದಾಗ ಜಗತ್ತು ಒಡೆಯುತ್ತದೆ. ಪ್ರೇಮ ತುಂಬಿದಾಗ ಜಗತ್ತು ವಿಸ್ತಾರ ಆಗುತ್ತದೆ. ಜಗತ್ತು ವಿಸ್ತಾರ ಆದಾಗ ಉಂಟಾಗುವುದೇ ಭಕ್ತಿ.

ಗುರು: ಶಿಷ್ಯನೇ, ಭಕ್ತಿ ಅನ್ನುವುದು ಅದ್ಭುತವಾಗಿದೆ. ಎಲ್ಲರೂ ಅದನ್ನು ಅನುಭವಿಸಬೇಕು. ಈ ಭಕ್ತಿಯ ದ್ವಾರ ಎಲ್ಲರಿಗೂ ತೆರೆದಿದೆ. ಭಗವಂತನ ಲೀಲಾವಿಲಾಸದಲ್ಲಿ ಬಂಧನ ಇರುವುದಿಲ್ಲ.

ಮನಶ್ಶಾಸ್ತ್ರಜ್ಞ: Man creates Gods in dozens though he cannot create a single magnet.

ಗುರು : ಈ ಭಕ್ತಿಯ ದ್ವಾರದಲ್ಲಿ ಬಡವರು, ಶ್ರೀಮಂತರು, ಜ್ಞಾನಿಗಳು, ಅಜ್ಞಾನಿಗಳು ಹೀಗೆ ಯಾರೇ ಇರಲಿ ಎಲ್ಲರೂ ಪ್ರವೇಶ ಮಾಡಬಹುದು.

ಭಕ್ತಿಯ ಇನ್ನೊಂದು ದೃಷ್ಟಿಕೋನ–ಮಲಗಿಸುವುದು ಭಕ್ತಿ; ಸಮಾಧಾನಗೊಳಿಸುವುದು, ನಿಶ್ಚಿಂತಗೊಳಿಸುವುದು ಭಕ್ತಿ.

ಭಕ್ತಿಯ ಕ್ಷೇತ್ರದಲ್ಲಿ ಇದ್ದವರು ತಲೆ ಕೆಡಿಸಿಕೊಳ್ಳುವುದಿಲ್ಲ. ಇದು ಒಂದು ವೈಶಿಷ್ಟ್ಯ. ಏಕೆಂದರೆ ಅವರಿಗೆ ಸತ್ಯ ಗೊತ್ತಿರುತ್ತದೆ.

ಗುರು : ಶಿಷ್ಯನೇ, ಒಂದಿಷ್ಟು ಇದರ ರುಚಿ ನೋಡು, ಭಕ್ತಿಯ ಕ್ಷೇತ್ರದಲ್ಲಿ ಎಲ್ಲರೂ ಮಾಲೀಕರು. ಇಲ್ಲಿ ಪಕ್ಷಪಾತ ಇಲ್ಲ. ಈ ಜಗತ್ತಿನಲ್ಲಿ ಪ್ರೇಮ, ಭಕ್ತಿ ಹರಿದರೆ ಇದು ಸ್ವರ್ಗ ಆಗುತ್ತದೆ. *

(ಕೃಪೆ : ಪ್ರವಚನ ತರಂಗ )

## ಶ್ರೀವಾಣಿ

ನಿಜವಾದ ಭಕ್ತಿಯುಳ್ಳವರಿಗೆ ಪರಮಾತ್ಮ ಬಹಳ ಸುಲಭವಾಗಿ ಒಲಿಯುತ್ತಾನೆ. ಈ ಬಗ್ಗೆ ಅನೇಕ ಕಥೆಗಳುಂಟು. ಪರಮಾತ್ಮನಿಗೆ ಅರ್ಪಣೆ ಮಾಡಿಕೊಳ್ಳಬೇಕು. ಅಂತರಂಗ ಬಹಿರಂಗ ಶುದ್ಧವಾಗಿರಬೇಕು. ಅಂತಹವರಿಗೆ ಪರಮಾತ್ಮ ಒಲಿಯುತ್ತಾನೆ. ಪರಮಾತ್ಮನ ದೃಷ್ಟಿಯಲ್ಲಿ ಎಲ್ಲರೂ ಒಂದೇ. ಅದಕ್ಕಾಗಿ ಆದಷ್ಟು ಮಟ್ಟಿಗೆ ಚಿಕ್ಕ ವಯಸ್ಸಿನಿಂದ ಒಳ್ಳೆಯ ಭಕ್ತಿ ಬೆಳೆಸಿಕೊಂಡು ಬರಬೇಕು.

* * *

ಮನುಷ್ಯನ ಆಚರಣೆ ಶುದ್ಧವಾಗಿರಬೇಕು. ನಡೆನುಡಿ ಶುದ್ಧವಾಗಿರಬೇಕು. ನಿಜವಾದ ಭಕ್ತಿಬೇಕು. ಪ್ರಾರ್ಥನೆ ಮಾಡತಕ್ಕ ಒಂದು ಅವಕಾಶ ಸಿಕ್ಕಿರುವುದು ಅದೊಂದು ಸುವರ್ಣಾವಕಾಶ. ಪ್ರಾರ್ಥನೆಗೆ ಸಕಾಲಕ್ಕೆ ಬಂದು ಭಕ್ತಿಯಿಂದ ಕುಳಿತುಕೊಂಡು ಮತ್ತು ಭಕ್ತಿಯಿಂದಲೇ ಪ್ರಾರ್ಥನೆ ಮಾಡಬೇಕು. ಅದರ ಫಲ ನಂತರ ನಿಧಾನವಾಗಿ ಗೊತ್ತಾಗುತ್ತದೆ.





## ಬೋಧನೆಯನ್ನು ತಪಸ್ಸಿನಂತೆ ಕಂಡವರು ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರವರು *

–ಯೋಗೀಶ್ ನಿರ್ವಿಕಲ್ಪ

ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳಂತೆ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವ ಮತ್ತೊಂದು ಯಾವುದಾದರೊಂದು ಅಂಗವಿದ್ದರೆ ಅದು ಶಿಕ್ಷಣಾಂಗ, ಒಂದು ರಾಷ್ಟ್ರದ ಭವಿಷ್ಯವನ್ನು ನಿರ್ಧರಿಸುವ ಮಹಾನ್‌ಶಕ್ತಿ ನಮ್ಮ ಶಿಕ್ಷಣಾಂಗಕ್ಕಿದೆ. ಶಿಕ್ಷಕ ಸಮುದಾಯ ಬೋಧನಾವೃತ್ತಿಯನ್ನು ಹೃದಯ ತುಂಬಿ ಪ್ರೀತಿಸುವುದರ ಮೂಲಕ ತಮ್ಮ ಹೊಣೆಗಾರಿಕೆ ಅರಿತು ಗಂಭೀರ ನಡೆ–ನುಡಿಗಳಿಂದ ಶೋಭಿಸುವುದು ಅತ್ಯಂತ ಮುಖ್ಯ.

ಜ್ಞಾನ ದೀವಿಗೆಯ ಮೂಲಕ ಮಾನವ ಸಮುದಾಯ ವನ್ನು ಅಜ್ಞಾನದ ಅಂಧಕಾರದಿಂದ ಜ್ಞಾನದ ಬೆಳಕಿನೆಡೆಗೆ ಕೊಂಡೊಯ್ಯುವ ಜ್ಞಾನಮೂರ್ತಿಯೇ ಗುರು. ಪಠ್ಯವಿಷಯ ಗಳೆಂಬ ಸರಕನ್ನು ವಿದ್ಯಾರ್ಥಿಗಳ ಮೆದುಳಿಗೆ ತಲುಪಿಸು ವುದೇ ಒಬ್ಬ ಗುರುವಿನ ಕರ್ತವ್ಯವಲ್ಲ. ವಿದ್ಯಾರ್ಥಿಗಳ ಬೌದ್ಧಿಕ ಹಾಗೂ ಮಾನಸಿಕ ವಿಕಾಸಕ್ಕೆ ಅವಕಾಶ ಕಲ್ಪಿಸುವುದರ ಮೂಲಕ ಸುಂದರ ವ್ಯಕ್ತಿತ್ವ ರೂಪಿಸುವುದು ನಿಜವಾದ ಒಬ್ಬ ಗುರುವಿನ ಕರ್ತವ್ಯಗಳಲ್ಲೊಂದು. ನಮ್ಮ ಪ್ರಾಚೀನ ಭಾರತದಲ್ಲಿ ಗುರುವಿಗೆ ಅತ್ಯುನ್ನತ ಸ್ಥಾನ ನೀಡ ಲಾಗಿದೆ. 'ಆಚಾರ್ಯ ದೇವೋಭವ' ಎಂದು ತೈತ್ತರೀಯೋಪ ನಿಷತ್ತು ತಿಳಿಸುತ್ತದೆ. ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಸ್ವತಃ ತನ್ನ ಮಕ್ಕಳೆಂದು ಭಾವಿಸಿ ವಿದ್ಯೆ ನೀಡುವ ನಿರ್ಮಲ ಚಿತ್ತ ಗುರುವಿನಲ್ಲಿರಬೇಕೆಂದು ಆಪಸ್ತಂಭದ ಧರ್ಮಸೂತ್ರ ತಿಳಿಸಿದೆ. ಗುರುವಿನಕಾಯಕ ಪರಮಪವಿತ್ರವಾದುದು ಹಾಗೂ ಪರಮಪುಣ್ಯದಾಯಕ ಕ್ರಿಯಾಕರ್ಮವೆಂದು ಶಾಸ್ತ್ರಗಳು ವಿಶ್ಲೇಷಿಸಿವೆ. ಅದರ ಸಮರ್ಥ ಕಾರ್ಯ ನಿರ್ವಹಣೆಗೆ ವಿಶೇಷವಾದ ಮನೋಸ್ಥಿತಿಯ ಸಿದ್ಧಿ ಗುರುವಿನಲ್ಲಿರಬೇಕು. ಸಮರ್ಪಣಾಭಾವ ತನ್ಮಯತೆ ಮತ್ತು ತಾದಾತ್ಮಗಳು ಒಬ್ಬ ಗುರುವಿನಲ್ಲಿರಬೇಕಾದ ಅತ್ಯಂತ ಅಗತ್ಯವಾದ ಅರ್ಹತೆಗಳು. ಒಬ್ಬ ಶ್ರೇಷ್ಠ ಗುರುವಿನ ಮಹತ್ವಪೂರ್ಣ ಕರ್ತವ್ಯ ಕುರಿತು ೧೨ನೇ ಶತಮಾನದ ಜಗನ್ಮಾತೆ ಅಕ್ಕಮಹಾದೇವಿ ತಾಯಿ ತಿಳಿಸುವ ವಚನ ಸಂದೇಶ ಅತ್ಯಂತ ಗಮನಾರ್ಹ. ಅವರ ಸಂದೇಶದ ನುಡಿಗಳು ಪ್ರತಿಯೊಬ್ಬ ಗುರುವಿಗೂ ಆದರ್ಶ ಹಾಗೂ ಮನನೀಯವಾದುದು.

*ಒಳಗೆ ಶೋಧಿಸಿ ಹೊರಗೆ ಶುದ್ಧಯಿಸಿ*
*ಒಳಹೊರಗೆಂಬ ಉಭಯ ಶಂಕೆಯ ಕಳೆದು*
*ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ*
*ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ*
*ಶಿಷ್ಯನ ಸರ್ವಪ್ರಪಂಚವ ನಿವೃತ್ತಿ ಮಾಡಿ*
*ನಿಜೋಪದೇಶವನಿತ್ತು*
*ಆ ಶಿಷ್ಯನ ನಿಜದಾದಿಯನೈದಿಸುವನೀಗ ಜ್ಞಾನಗುರು*
*ಆ ಸಹಜ ಗುರುವೀಗ ಜಗದಾರಾಧ್ಯನು,*
*ಅವನ ಶ್ರೀಪಾದಕೆ ನಮೋ ನಮೋ ಎಂಬೆನು*
*ಕಾಣಾ ಚೆನ್ನಮಲ್ಲಿಕಾರ್ಜುನಾ.*

ಶಿಷ್ಯನ ಸರ್ವಪ್ರಪಂಚದ ಇಂದ್ರಿಯ ವೃತ್ತಿಯ ಚಂಚಲತ್ವ ವನ್ನು ನಿವೃತ್ತಿ ಮಾಡಿ ಆತನಲ್ಲಿ ಉತ್ತಮ ಸಂಸ್ಕಾರವನ್ನು ಉಜ್ವಲಗೊಳಿಸುವುದು ಗುರುವಿನ ಪರಮ ಕರ್ತವ್ಯ. ಶಿಷ್ಯನ ಅಂತರಂಗ ಮತ್ತು ಬಹಿರಂಗಗಳೆರಡನ್ನು ಶುದ್ಧ ಮಾಡು ವುದರ ಮೂಲಕ ನಡೆನುಡಿಗಳೆರಡರಲ್ಲಿಯೂ ತಾದಾತ್ಮತೆ ಮೂಡಿಸುವುದು ನಿಜವಾದ ಒಬ್ಬ ಗುರುವಿನ ಲಕ್ಷಣ. ವಿದ್ಯಾರ್ಥಿಯ ಪೂರ್ವಾಪರ ಸಂಸ್ಕಾರಗಳನ್ನು ಸೂಕ್ಷ್ಮವಾಗಿ ತಿಳಿದು ಅವನನ್ನು ಗುರು ಸಂಸ್ಕರಿಸಬೇಕು. ಯಾವ ಉತ್ತಮ ಸಂಸ್ಕಾರ ನೀಡುವುದರಿಂದ ಆ ವಿದ್ಯಾರ್ಥಿ ವಿಕಸಿತ ಗೊಳ್ಳುತ್ತಾನೆಂಬ ನಿರ್ಣಯತ್ವದ ಅರಿವು ಗುರುವಿನಲ್ಲಿರ ಬೇಕು. ವಿದ್ಯಾರ್ಥಿಯು ಸರ್ವತೋಮುಖ ಪ್ರಗತಿ ಕಾಣು ವಂತೆ ಮಾಡುವುದರ ಮೂಲಕ ಆತನನ್ನು ಸಮಾಜಮುಖಿ ಯನ್ನಾಗಿಸುವ ಮುಖ್ಯ ಕಾರ್ಯಗಾರದಲ್ಲಿ ಯಶಸ್ವಿ ಯಾಗುವ ಗುರುವೇ ಜಗತ್ತಿಗೆ ತಾಯಿಯವರದು. ಗುರು ವಿನಲ್ಲಿರಬೇಕಾದ ಈ ಎಲ್ಲಾ ಆದರ್ಶ ಮೌಲ್ಯಗಳ ಪ್ರತಿರೂಪ ದಂತೆ ಕಂಡವರು ಶ್ರೇಷ್ಠ ತತ್ವಜ್ಞಾನಿಯಾದ ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರವರು.

* ಬರಹಗಾರರು, ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ– 577 202.

ಅವರು ಪಾಶ್ಚಾತ್ಯರಿಗೆ ಭಾರತೀಯ ತತ್ತ್ವಶಾಸ್ತ್ರವನ್ನು ಸಮರ್ಪಕವಾಗಿ ಬೋಧಿಸಿದ ಶ್ರೇಷ್ಠ ಗುರುವರ್ಯರು. ಧರ್ಮದ ಹಿನ್ನಲೆಯಲ್ಲಿ ಪ್ರಜಾಪ್ರಭುತ್ವ ಸಾಮಾಜಿಕ ನ್ಯಾಯ ಮತ್ತು ವಿಶ್ವಶಾಂತಿಯ ಪರಿಕಲ್ಪನೆಗಳು ರೂಪಗೊಳ್ಳಬೇಕೆಂಬ ಸತ್‌ಪ್ರಯತ್ನಕ್ಕೆ ಮುನ್ನುಡಿಯನ್ನು ಬರೆದವರು. ಶಿಕ್ಷಣ ಹಾಗೂ ಗುರುವಿನ ತತ್ತ್ವಮೌಲ್ಯಗಳಿಗೆ ಪರಿಪೂರ್ಣ ಅರ್ಥ ತಂದುಕೊಟ್ಟ ಅವರು ಭಾರತೀಯ ಶೈಕ್ಷಣಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆ ಸ್ಮರಣೀಯ. ಅವರ ದೂರದರ್ಶಿತ್ವದ ಸಂದೇಶ ಗಳು ಎಲ್ಲಾ ದೇಶಕಾಲಕ್ಕೂ ಅನ್ವಯ ಹಾಗೂ ಆದರ್ಶವಾದುದು.

ಶಿಕ್ಷಣ ಎಂದರೇನೆಂಬುದನ್ನು ಅವರು ವಿವಿಧ ದೃಷ್ಟಿ ಕೋನಗಳಿಂದ ತಾರ್ಕಿಕವಾಗಿ ಚಿಂತಿಸಿದವರು. ಶಿಕ್ಷಣ ಕುರಿತ ಅವರ ಅಭಿಪ್ರಾಯ ಅತ್ಯಂತ ಗಮನಾರ್ಹ. ಯಾವುದು ಮನಸ್ಸು ಆತ್ಮಗಳಿಗೆ ತರಬೇತಿ ನೀಡಬಲ್ಲುದೋ ಅದೇ ಶಿಕ್ಷಣವೆಂಬ ಪ್ರತಿಪಾದನೆ ಅವರದು. ಅವರ ದೃಷ್ಟಿ ಯಲ್ಲಿ ಕೇವಲ ಬೌದ್ಧಿಕ ವಿಕಾಸದ ತರಬೇತಿಗೆ ಸೀಮಿತ ವಾದ ಶಿಕ್ಷಣ ಪರಿಪೂರ್ಣ ಅರ್ಥದಲ್ಲಿ ಶಿಕ್ಷಣ ಎನಿಸಿಕೊಳ್ಳಲು ಸಾಧ್ಯವಿರಲಿಲ್ಲ. ಶಿಕ್ಷಣ ವಿದ್ಯಾರ್ಥಿಯ ನಿರ್ಮಲ ಮನಸ್ಸಿನ ರಚನೆಗೆ ಅವಕಾಶ ನೀಡಬೇಕು. ಮಾನವೀಯ ಸದ್ಗುಣಗಳ ವಿಕಸನಕ್ಕೆ ಶಿಕ್ಷಣ ಪ್ರೇರಣಾ ಶಕ್ತಿ ಆಗಬೇಕೆಂಬ ಅಭಿಪ್ರಾಯ ಅವರದ್ದು. ಮಾನವನ ಬುದ್ಧಿ ಮತ್ತು ಮನಸ್ಸಿಗಳಿಗೆ ನೀಡುವ ಸಂಸ್ಕಾರವೇ ಸಂಸ್ಕೃತಿಯಾದ ಕಾರಣ ಶಿಕ್ಷಣವು ಸಂಸ್ಕೃತಿಯ ನಿರ್ಮಾಣಕ್ಕೆ ಮುಖ್ಯ ವೇದಿಕೆಯಾಗಬೇಕೆಂಬ ಅಭಿಪ್ರಾಯದ ಕರೆಯನ್ನು ವಿಶ್ವಸಮುದಾಯಕ್ಕೆ ನೀಡಿದ ಅವರ ದೃಷ್ಟಿಯಲ್ಲಿ 'ಮನುಕುಲದ ಕಲ್ಯಾಣವೇ ಶಿಕ್ಷಣದ ಪರಮಧ್ಯೇಯ'ವಾಗಿತ್ತು.

ಒಬ್ಬ ಸಂಶೋಧಕ ವಿದ್ಯಾರ್ಥಿಯಂತೆ ಅವರು ನಿತ್ಯವೂ ಹೊಸ ಹೊಸ ವಿಷಯಗಳನ್ನು ಗ್ರಹಿಸುತ್ತಾ ತಮ್ಮ ಬೋಧನಾ ವೃತ್ತಿ ಬದುಕಿನಲ್ಲಿ ಸಾಗಿದವರು. ಬೋಧನೆ ಯನ್ನು ಒಂದು ತಪಸ್ಸಿನಂತೆ ಕಂಡು ಆರಾಧಿಸಿದ ಅವರಿಗೆ ಬೋಧನಾವೃತ್ತಿ ಅಪಾರ ಆನಂದವನ್ನು ತಂದುಕೊಟ್ಟಿತ್ತು. ತರಗತಿಯ ಪ್ರವೇಶಕ್ಕೂ ಮುನ್ನ ಬೋಧಿಸಬೇಕಾದ ಅಂದಿನ ಪಠ್ಯ ವಿಷಯ ಭಾಗದ ನೂರಕ್ಕಿಂತಲೂ ಅಧಿಕ ವಿಷಯ ಸಂಗ್ರಹಿಸುತ್ತಿದ್ದುದು ಅವರ ಪರಿಣಾಮಕಾರಿ ಬೋಧನೆಯ ಒಂದು ರಹಸ್ಯವಾಗಿತ್ತು. ಅವರ ಪಾಠಪ್ರವಚನಗಳೆಂದರೆ ವಿದ್ಯಾರ್ಥಿಯ ಸಮೂಹದಲ್ಲಿ ವಿಶೇಷ ಆಸಕ್ತಿಯ ಜೊತೆ ರೋಮಾಂಚನವನ್ನುಂಟುಮಾಡುತ್ತಿತ್ತು. ಪರಕಾಯ ಪ್ರವೇಶದ ಅನುಭವವನ್ನುಂಟು ಮಾಡುತ್ತಿದ್ದ ಅವರ ಬೋಧನೆಯಲ್ಲಿ ಬದ್ಧತೆ ಮತ್ತು ತನ್ಮಯತೆಗಳು ಅನಾವರಣ ಗೊಂಡಿದ್ದವು. ಪರಿಶುದ್ಧ ಅಂತಃಕರಣದಿಂದ ಹೊರ ಹೊಮ್ಮುತ್ತಿದ್ದ ಅವರ ಪಾಠಪ್ರವಚನಗಳು ವಿದ್ಯಾರ್ಥಿಗಳ ಹೃನ್ಮನಕ್ಕೆ ಅಮೃತದ ಸಿಂಚನವನ್ನುಂಟುಮಾಡುತ್ತಿತ್ತು. ಅದು ವಿದ್ಯಾರ್ಥಿ ಸಮೂಹದಲ್ಲಿ ಸಾತ್ವಿಕ ಗುಣಗಳ ವಿಕಸನಕ್ಕೆ ಪ್ರೇರಕ ಶಕ್ತಿಯಾಗಿ ಪರಿಣಮಿಸಿತ್ತು. ಬೋಧನೆ ಒಂದು ಕಲೆ ಎಂಬುವುದು ಅದರಿಂದ ನಿರೂಪಿಸಲ್ಪಟ್ಟಿತ್ತು. ಅವರೊಳಗಿನ ವೃತ್ತಿ ತಾದಾತ್ಮ್ಯತೆಯು ಅವರ ವೃತ್ತಿ ಬದುಕಿನ ಯಶಸ್ಸಿಗೆ ಮುಖ್ಯ ಕಾರಣವಾಗಿತ್ತು.

ದೇಶದೆಲ್ಲೆಡೆ ವ್ಯಾಪಕವಾಗಿ ಹಬ್ಬುತ್ತಿರುವ ಭ್ರಷ್ಟಾಚಾರ –ಸ್ವಾರ್ಥ ರಾಜಕಾರಣಿಗಳ ಸ್ವಜನ ಪಕ್ಷಪಾತ ಹಾಗೂ ಅಪವ್ಯಯಗಳು ಪ್ರಜಾಪ್ರಭುತ್ವದ ವ್ಯವಸ್ಥೆಗೆ ಬಹುದೊಡ್ಡ ಆತಂಕವೆಂದು ಭಾವಿಸಿದ್ದ ಅವರು ಸತ್ಯ ಮತ್ತು ಅಹಿಂಸಾ ತತ್ತ್ವವನ್ನು ಪ್ರಬಲವಾಗಿ ಪ್ರತಿಪಾದಿಸಿದರು. ರಾಜಕೀಯ ಕ್ಷೇತ್ರವನ್ನು ಆಧ್ಯಾತ್ಮೀಕರಣಗೊಳಿಸಬೇಕೆಂಬ ಮಹಾತ್ಮ ಕಾಂಕ್ಷೆ ಅವರದು. ಜ್ಞಾನ ಪರ್ವತದಂತಿದ್ದ ಅವರಲ್ಲಿ ಸತ್ಯ–ಅಹಿಂಸೆ ಮತ್ತು ಪ್ರಾಮಾಣಿಕತೆಗಳು ಮನೆಮಾಡಿಕೊಂಡಿದ್ದವು. ಸತ್ಯ ವಾದಿಗಳಾದಂತಹ ಅವರ ಮುಂದೆ ಅಸತ್ಯವೂ ಸತ್ಯವನ್ನೇ ನುಡಿಯುತ್ತಿತ್ತು. ೧೯೪೯–೫೨ರ ಅವಧಿಯಲ್ಲಿ ಅವರು ಸೋವಿಯತ್ ರಷ್ಯಾದ ಭಾರತದ ರಾಯಭಾರಿಯಾಗಿ ನಿಯೋಜನೆಗೊಂಡಿದ್ದರು. ೧೯೪೯ರ ಅಂದಿನ ದಿನಗಳಲ್ಲಿ ರಷ್ಯಾದಲ್ಲಿ ಸ್ಟಾಲಿನ್‌ರವರ ಆಡಳಿತ ವ್ಯವಸ್ಥೆ ಜಾರಿಯಲ್ಲಿತ್ತು. ರಷ್ಯಾದಲ್ಲಿ ಸ್ಟಾಲಿನ್‌ನವರಿಗೆ ಯಾರೊಬ್ಬರೂ ಎದುರು ಮಾತಾಡುವವರು ಇರಲಿಲ್ಲ. ಇಡೀ ಪ್ರಪಂಚದಲ್ಲಿಯೇ ಅವರ ವಿರುದ್ಧ ಧ್ವನಿ ಎತ್ತಿದ ಒಬ್ಬ ವ್ಯಕ್ತಿಯೂ ಇರಲಿಲ್ಲ. ಅಂತರಾಷ್ಟ್ರೀಯ ಮಟ್ಟದಲ್ಲಿ ಅಂದು ಸ್ಟಾಲಿನ್ ಅತ್ಯಂತ ಶಕ್ತಿಶಾಲಿಯಾದ ರಾಜಕೀಯ ಮುಖಂಡ ಎನಿಸಿ ಕೊಂಡಿದ್ದರು. ಅಂತಹ ಸಂದರ್ಭದಲ್ಲಿ ರಷ್ಯಾಕ್ಕೆ ರಾಯಭಾರಿ ಯಾಗಿ ಹೋಗಿದ್ದ ರಾಧಾಕೃಷ್ಣನ್ ರವರನ್ನು ಸ್ವಾಗತಿಸಲು ಸ್ವತಃ ಸ್ಟಾಲಿನ್ ಬಂದಿದ್ದರು. ಸ್ಟಾಲಿನ್‌ರವರಿಗೆ ರಾಧಾಕೃಷ್ಣನ್ ಹಸ್ತಲಾಘವ ನೀಡುತ್ತಾ ಹೇಳಿದ ಮಾತುಗಳು ಅವರ ಸತ್ಯವಾದತನಕ್ಕೆ ಹಿಡಿದ ಕೈಗನ್ನಡಿ ಹಾಗೂ ಸ್ಟಾಲಿನ್‌ರವರ ಮನಸ್ಸನ್ನು ಪರಿವರ್ತಿಸುವಂತಿದ್ದಿತ್ತು. 'ನಮ್ಮ ದೇಶದಲ್ಲಿ ಒಬ್ಬ ಚಕ್ರವರ್ತಿ ಇದ್ದ. ಆತ ರಕ್ತಪಾತದಿಂದ ಕೂಡಿದ ಭಾರೀ ಯುದ್ಧದ ಮೂಲಕ ಸಾಮ್ರಾಜ್ಯ ವೊಂದನ್ನು ಗೆದ್ದನು. ಆನಂತರ ವಿರಕ್ತನಾಗಿ ಯುದ್ಧವನ್ನು ಬಿಟ್ಟುಕೊಟ್ಟು ಸನ್ಯಾಸಿಯಾದನು. ಅಹಿಂಸೆಯ ಮಹಾನ್ ಬೋಧಕ ನಾದನು. ಅಂತೆಯೇ ಶಕ್ತಿ ಸಾಹಸಗಳಿಂದ ಕ್ರಾಂತಿಯ ಮೂಲಕ ಅಧಿಕಾರಕ್ಕೆ ಬಂದಿರುವ ನೀವು ಮುಂದೆ ಏನಾಗುತ್ತೀರೋ ಯಾರು ಬಲ್ಲರು!'

ಆಂಧ್ರಾ ಮತ್ತು ಬನಾರಸ್ ವಿಶ್ವವಿದ್ಯಾನಿಲಯಗಳ ಉಪಕುಲಪತಿಗಳಾದ ಹಾಗೂ ಸ್ವತಂತ್ರ ಭಾರತದ ಮೊದಲ ಶಿಕ್ಷಣ ಆಯೋಗದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಅವರ ಸರಳ ಬದುಕಿಗೆ ರಾಷ್ಟ್ರಾಧ್ಯಕ್ಷರಂತಹ ಹುದ್ದೆ ಸಹ ಅಡ್ಡಿ ಪಡಿಸಲಿಲ್ಲ. ಅವರು ರಚಿಸಿದ ಭಾರತೀಯ ತತ್ವಶಾಸ್ತ್ರ 'Religion society is this peace?' 'Hindu view of life', Ethics of the vedantha', Idiealistic view of life' The philosophy of Ravindranatha Tagore' ಮುಂತಾದ ವಿದ್ವತ್‌ಪೂರ್ಣ ಕೃತಿಗಳು ಲೋಕಪ್ರಿಯ ವಾದವುಗಳು. ಜೀವನದ ಪ್ರತಿಯೊಂದು ಕ್ಷಣಕ್ಷಣಗಳನ್ನು ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗಾಗಿಯೇ ಧ್ಯಾನಿಸಿದ ಅವರು ಶಿಕ್ಷಣ ಕ್ಷೇತ್ರದ ಶ್ರೇಷ್ಠ ತಪಸ್ವಿಯಾಗಿದ್ದಾರೆ.

ಇಂದು ನಮ್ಮ ಶಿಕ್ಷಣ ಮತ್ತು ಬೋಧನಾ ವೃತ್ತಿಗಳು ವ್ಯವಹಾರಿಕ ಸ್ವರೂಪವನ್ನು ಪಡೆದಿವೆ. ಅವುಗಳು ಮಾರು ಕಟ್ಟೆಯಲ್ಲಿ ಮಾರುವ ಸರಕುಗಳಾಗಿವೆ. ವ್ಯವಹಾರಿಕ ಲೆಕ್ಕಾಚಾರದ ಶಿಕ್ಷಣದ ಬೋಧನೆಯು ಗುರುಶಿಷ್ಯರ ನಡುವಿನ ಮಧುರ ಸಂಬಂಧವನ್ನು ಸಡಿಲಗೊಳಿಸಿದೆ. ಎಲ್ಲಾ ವೃತ್ತಿಗಳಿ ಗಿಂತ ಬೋಧನಾ ವೃತ್ತಿ ಅತ್ಯಂತ ಶ್ರೇಷ್ಠವೆಂದು ತಿಳಿದು ಉನ್ನತ ವೃತ್ತಿಗಳನ್ನು ತೊರೆದು ಬೋಧಕ ವೃತ್ತಿಗೆ ಬರುತ್ತಿದ್ದಂತಹ ದಿನಗಳು ಇಂದು ನೆನಪು ಮಾತ್ರ. ಅಂದು ನಮ್ಮ ಶಿಕ್ಷಣವು ಧಾರ್ಮಿಕ ಪರಿಸರದಲ್ಲಿ ನಡೆಯುತ್ತಿತ್ತು. ಧರ್ಮ ಸಂಬಂಧದ ನೈತಿಕ ನೆಲೆಗಟ್ಟಿನ ಆಧಾರ ಅಂದಿನ ಶಿಕ್ಷಣ ಪದ್ಧತಿಗೆ ಇದ್ದ ಕಾರಣವೇ ಸಮಾಜದಲ್ಲಿ ಆದರ್ಶ ನೈತಿಕ ಮೌಲ್ಯಗಳನ್ನು ಕಾಣುತ್ತಿದ್ದವು. ಇಂದಿನ ದಿನಗಳಲ್ಲಿ ನಮ್ಮ ಶಿಕ್ಷಣ ಧಾರ್ಮಿಕ ಆಸರೆ ಕಳೆದುಕೊಂಡು ವ್ಯವಹಾರಿಕ ಹಾಗೂ ಯಾಂತ್ರಿಕ ಸ್ವರೂಪ ಪಡೆದಿರುವುದು ಸಾಮಾಜಿಕ ಮೌಲ್ಯಗಳ ಕಣ್ಮರೆಗೆ ಕಾರಣವಾಗಿವೆ. ನಮ್ಮ ಶಿಕ್ಷಣ ಪದ್ಧತಿಯು ಪಾಶ್ಚಿಮಾತ್ಯರ ಶಿಕ್ಷಣದಂತೆ ಭೌತಿಕ (Materialistic) ಮಹತ್ವ ಪಡೆದಿರುವುದು ನಮ್ಮ ದೇಶದ ದುರಂತ ಸಂಗತಿ. ನಮ್ಮ ಪ್ರಾಚೀನ ಗುರುಕುಲಗಳ ಪದ್ಧತಿ ಯಂತೆ ಆಧ್ಯಾತ್ಮಿಕತೆಯ (Spiritualistic) ಮಹತ್ವವನ್ನು ಹೊಂದಿದ ಶಿಕ್ಷಣದ ಅವಶ್ಯಕತೆಯಿದೆ. ಮಾನವೀಯ ತತ್ತ್ವ ಗಳಿಲ್ಲದೆ ಅಣ್ವಸ್ತ್ರಗಳನ್ನು ನಂಬಿ ಬದುಕುತ್ತಿರುವ ಪ್ರಸ್ತುತ ಮಾನವ ಸಮಾಜಕ್ಕೆ ಶಿಕ್ಷಣ ಮಾನವೀಯ ಮೌಲ್ಯಗಳ ಸತ್ಯ ದರ್ಶನ ಮಾಡಿಸುವ ಗುರುತರ ಹೊಣೆಗಾರಿಕೆ ಇದೆ. ಶಿಕ್ಷಣವು ಭ್ರಾತೃತ್ವ– ಪರಿಸರ ಪ್ರಜ್ಞೆ–ಪರಸ್ಪರ ನಂಬಿಕೆ ಮತ್ತು ಭಾವೈಕ್ಯತೆಗಳಿಗೆ ಪೂರಕವಾಗಬೇಕು.

ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳಂತೆ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವ ಮತ್ತೊಂದು ಯಾವುದಾದರೊಂದು ಅಂಗವಿದ್ದರೆ ಅದು ಶಿಕ್ಷಣಾಂಗ. ಒಂದು ರಾಷ್ಟ್ರದ ಭವಿಷ್ಯವನ್ನು ನಿರ್ಧರಿಸುವ ಮಹಾನ್‌ಶಕ್ತಿ ನಮ್ಮ ಶಿಕ್ಷಣಾಂಗಕ್ಕಿದೆ. ಶಿಕ್ಷಕ ಸಮುದಾಯ ಬೋಧನಾವೃತ್ತಿಯನ್ನು ಹೃದಯತುಂಬಿ ಪ್ರೀತಿಸುವುದರ ಮೂಲಕ ತಮ್ಮ ಹೊಣೆ ಗಾರಿಕೆ ಅರಿತು ಗಂಭೀರ ನಡೆ–ನುಡಿಗಳಿಂದ ಶೋಭಿ ಸುವುದು ಅತ್ಯಂತ ಮುಖ್ಯ. ಪ್ರತಿಭಾವಂತರು ಬೋಧನಾ ವೃತ್ತಿಯನ್ನು ಆಯ್ಕೆ ಮಾಡಿಕೊಂಡು ಕಳೆಗುಂದುತ್ತಿರುವ ಬೋಧನಾವೃತ್ತಿಯ ಪಾವಿತ್ರ್ಯತೆಯನ್ನು ಕಾಪಾಡಬೇಕು. ಶಿಕ್ಷಕ ಸಮುದಾಯ ರಾಷ್ಟ್ರಕ್ಕೆ ಸನ್ಮಾರ್ಗ ತೋರುವ ದಿಕ್ಸೂಚಿ ಯಾಗಬೇಕು.

ನಮ್ಮ ದೇಶದ ಪ್ರಜಾಪ್ರಭುತ್ವ ವ್ಯವಸ್ಥೆ ಯಶಸ್ವಿಯಾಗ ಬೇಕಾದರೆ ದೇಶದ ಸಾಕ್ಷರತೆಯ ಪ್ರಮಾಣ ಹೆಚ್ಚಾಗಬೇಕು. ಸರ್ಕಾರ ಶಿಕ್ಷಣಕ್ಕಾಗಿ ಸಾವಿರಾರು ಕೋಟಿ ಹಣ ವ್ಯಯ ಮಾಡುತ್ತಿದ್ದರೂ ಪರಿಪೂರ್ಣ ಸಾಕ್ಷರತೆ ಸಾಧಿಸಲು ಸಾಧ್ಯ ವಾಗಿಲ್ಲ. ೧೪ ವರ್ಷದ ಎಲ್ಲ ಮಕ್ಕಳಿಗೂ ಶಿಕ್ಷಣ ನೀಡಲು

ಇದುವರೆಗೂ ಸಾಧ್ಯವಾಗಿಲ್ಲ. ನಮ್ಮ ಶಿಕ್ಷಣದ ಬಂಡಿ ಗ್ರಾಮೀಣ ಪ್ರದೇಶದಲ್ಲಿ ನಿಧಾನವಾಗಿ ಸಾಗಿದೆ. ಶಾಲಾ ಕೊಠಡಿ–ಪೀಠೋಪಕರಣ–ಪಾಠೋಪಕರಣ–ಶುದ್ಧನೀರು –ಶೌಚಾಲಯ–ಶಿಕ್ಷಕರುಗಳ ಕೊರತೆ... ಮುಂತಾದ ಸಮಸ್ಯೆಗಳು ಇಂದಿಗೂ ಸಮಸ್ಯೆಗಳಾಗಿಯೇ ಉಳಿದಿದೆ. ಗ್ರಾಮೀಣ ಪ್ರದೇಶದಲ್ಲಿ ವ್ಯವಸ್ಥಿತ ಸಾರಿಗೆ ಸೌಲಭ್ಯವಿಲ್ಲದ ವಿದ್ಯಾರ್ಥಿ ಹಾಗೂ ಶಿಕ್ಷಕ ಸಮುದಾಯ ಸಾಕಷ್ಟು ತೊಂದರೆ ಒಳಗಾಗಿದೆ. ಗ್ರಾಮೀಣ ಪ್ರದೇಶದಲ್ಲಿನ ಶಿಕ್ಷಕ ಸಮುದಾಯಕ್ಕೆ ಮನೆಗಳ ನಿರ್ಮಾಣ ಮತ್ತು ಉನ್ನತ ವೈದ್ಯಕೀಯ ಕಾರ್ಯ ಯೋಜನೆಗಳು ನನಸಾಗಬೇಕಿದೆ.

ಶಿಕ್ಷಕ ಸಮುದಾಯವನ್ನು ಸರ್ಕಾರ ಮತ್ತು ಸಮಾಜ ಅನಾದರ ದೃಷ್ಟಿಯಿಂದ ನೋಡದೆ ವಿಶೇಷವಾಗಿ ಗೌರವಿಸ ಬೇಕು. ಸರ್ಕಾರ ಅವೈಜ್ಞಾನಿಕ ಶಿಕ್ಷಣ ಪದ್ಧತಿಗಳನ್ನು ಕೈಬಿಟ್ಟು ಶಿಕ್ಷಕರ ಸೃಜನಶೀಲತೆ ಮತ್ತು ಬೋಧನಾ ಸಾಮರ್ಥ್ಯ ವನ್ನು ಅಧಿಕಗೊಳಿಸುವ ವೈಚಾರಿಕಪೂರ್ಣ ಕಾರ್ಯಕ್ರಮ ಗಳನ್ನು ರೂಪಿಸಬೇಕು. ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರ ಸಮಯೋಜಿತ ನಿರ್ಧಾರಗಳನ್ನು ತೆಗೆದುಕೊಳ್ಳ ಬೇಕು. ಸರ್ಕಾರ ಸಂಸ್ಕೃತಿ ಸಹಿತ ಶಿಕ್ಷಣ ನೀಡುವ ಸಂಬಂಧ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸುವುದರ ಮೂಲಕ ಆದರ್ಶ ಸಮಾಜ ನಿರ್ಮಾಣ ಕಾರ್ಯಕ್ಕೆ ಮುಂದಾಗಬೇಕು.

ಡಾ॥ ರಾಧಾಕೃಷ್ಣನ್‌ರವರ ಜಯಂತಿಯ ಸಂದರ್ಭದಲ್ಲಿ ಶಿಕ್ಷಕ ಸಮುದಾಯ ಅವರ ಆದರ್ಶ ಪಾಲನೆಗೆ ಕಂಕಣ ಬದ್ಧರಾಗಿ ಅವರ ಆದರ್ಶ ತತ್ವಗಳ ಅನುಷ್ಠಾನದ ಮೂಲಕ ಅವರಿಗೆ ಗುರುನಮನ ಸಲ್ಲಿಸುವುದು ಅತ್ಯಂತ ಅರ್ಥಪೂರ್ಣ ಎನಿಸಿಕೊಳ್ಳುತ್ತದೆ. ಶಿಕ್ಷಕವೃತ್ತಿ ಧರ್ಮವನ್ನು ಹೃದಯ ತುಂಬಿ ಪ್ರೀತಿಸುತ್ತಾ ಯಾವುದೇ ಪ್ರಶಸ್ತಿ, ಗೌರವಗಳನ್ನು ಬಯಸದೆ ತಮ್ಮ ವೃತ್ತಿಧರ್ಮದಲ್ಲಿ ತನ್ಮಯರಾಗಿರುವ ಅಸಂಖ್ಯಾತ ಅಜ್ಞಾತ ಶಿಕ್ಷಕರು ಇಂದಿಗೂ ನಮ್ಮ ಸಮಾಜದಲ್ಲಿದ್ದಾರೆ. ನಮ್ಮ ಸಮಾಜದಲ್ಲಿ ಕೆಲವೊಂದು ಸಾಮಾಜಿಕ ಮೌಲ್ಯಗಳು ಇನ್ನೂ ಜೀವಂತವಾಗಿ ಉಳಿದಿರುವುದು ಇಂತಹ ನಿಸ್ವಾರ್ಥ ಪರ ಶಿಕ್ಷಕರುಗಳಿಂದ ಮಾತ್ರ. ಅವರೆಲ್ಲರಿಗೂ ನಾವು ನಮ್ಮ ಗೌರವಪೂರ್ವಕ ಭಕ್ತಿಯ ನಮನಗಳನ್ನು ಸಲ್ಲಿಸುವುದು ಅತ್ಯಂತ ಅರ್ಥಪೂರ್ಣವಾಗಿದೆ.

*

## ತಿರುಕ್ಕುರುಳ್

ಅಧ್ಯಾಯ –೨೫
ಗೃಹಧರ್ಮ

### ಕರುಣೆ ಹೊಂದಿರುವುದು

ದಯೆಯ ಸಿರಿ ಸಿರಿಯೆಲ್ಲಾ ಹಿರಿಯ
ಸಿರಿಯೆನಿಸುವುದು;
ಇಳೆಯ ಸಿರಿ ನೀಚರ ಬಳಿಯೂ ಇಹುದು.

ಋಜುಮಾರ್ಗದಿ ನಿಂತು ಕರುಣೆಯನು ಕೈಗೊಳ್ಳುವುದು
ಹಲವು ಮಾರ್ಗವ ಆರೈದರೂ ಬಾಳಿಗದೆ ನೆರವಹುದು

ಕರುಣೆ ತುಂಬಿಹ ಹೃದಯಿಗಳು ಹೊಗರು,
ಕತ್ತಲೆ ತುಂಬಿಹ ದುಃಖಲೋಕದೊಳಗೆ.

ಸಕಲ ಜೀವಿಗಳ ರಕ್ಷಿಸಿ ಕರುಣೆದೋರಿ ನಡೆವವರು,
ಪಾಪಕರ್ಮದ ಭಯದಿಂದ ಮುಕ್ತರಾಗುವರು.

ದಯೆಯುಳ್ಳವರಿಗೆ ದುಃಖವದಿಲ್ಲ; ವಾಯು ವ್ಯಾಪಿಸಿಹ
ಈ ಮಹಾ ವಿಶ್ವವೇ ಸಾಕ್ಷಿ ಇದಕೆ.

ಕರುಣೆಯನು ತೊರೆದು ಕೇಡಸಗುವವರನು,
ಧರ್ಮವನು ಮರೆತವರೆಂಬರು ಪ್ರಾಜ್ಞರು.

ಹಣವಿಲ್ಲದವಗೆ ಐಹಿಕ ಸುಖವದಿಲ್ಲ ;
ದಯೆಯಿಲ್ಲದವಗೆ ಪರಸುಖವಿಲ್ಲ.

ಸಿರಿಯಿಲ್ಲದವರು ಮತ್ತೊಮ್ಮೆ ಪಡೆಯಬಲ್ಲರದನು;
ದಯೆಯಿಲ್ಲದವರು ಪಡೆಯರೆಂದೂ ಶ್ರೇಯವನು.

ಅರಿವಿಲ್ಲದವನು ಸತ್ಯಾರ್ಥವನು ಕಂಡಂತೆ ;
ದಯೆಯಿಲ್ಲದವನು ಮಾಡುವ ಧರ್ಮ.

ಬಲಿಷ್ಠರ ಮುಂದೆ ತಾನಂಜಿ ನಿಲುವುದನು ನೆನೆವುದು,
ತಾನು ತನಗಿಂತ ಬಲಹೀನರನು ನೋಯಿಸುವಂದು.

ಕನ್ನಡ ಅನುವಾದ : ನ. ಮುನಿಸ್ವಾಮಿ





## ಇಸ್ಲಾಂ ಹಾಗೂ ವೀರಶೈವ ಸಂಸ್ಕೃತಿ – ಒಂದು ಚಿಂತನೆ

–ಪ್ರೊ. ಡಿ. ಜವರೇಗೌಡ *

ಮಹಮ್ಮದರ ಮತ್ತು ಬಸವಣ್ಣನವರ ಧಾರ್ಮಿಕ ಹಿನ್ನಲೆಗಳು ಪರಸ್ಪರ ಭಿನ್ನವಾದುವೆಂಬುದನ್ನು ಗಮನಿಸಿ ದಾಗ, ಅವರು ಸ್ಥಾಪಿಸಿದ ಧರ್ಮಗಳಲ್ಲಿ ಸಾಮ್ಯಾಂಶಗಳು ಇವೆಯಾದರೂ, ಅವರ ಜೀವನ ವಿಧಾನದಲ್ಲಿ ಸಾಧನೆ ಸಿದ್ಧಿಗಳಲ್ಲಿ ವೈಷಮ್ಯಗಳೇ ಹೆಚ್ಚು ಪ್ರಮಾಣದಲ್ಲಿವೆಯೆಂಬು ದರಲ್ಲಿ ಯಾಥಾರ್ಥ್ಯವಿದೆ. ಅನುಭವ ಗಮ್ಯವಲ್ಲದ ಮರಣೋತ್ತರ ಜೀವನದ ಬಗ್ಗೆ ವೀರಶೈವ ಧರ್ಮ ನಿರ್ಲಕ್ಷ್ಯದಿಂದಿದೆ. ಪುನರ್ಜನ್ಮ ಕರ್ಮಸಿದ್ಧಾಂತಗಳ ಬಗ್ಗೆಯೂ ಅದು ತಟಸ್ಥ. ಇಸ್ಲಾಂ ಧರ್ಮ ಪುನರ್ಜನ್ಮ ವನ್ನೊಪ್ಪಿಕೊಳ್ಳದಿದ್ದರೂ, ಮರಣೋತ್ತರ ಕಾಲದಲ್ಲಿ ಪೂರ್ವ ಜೀವನದ ಕರ್ಮಗಳಿಗನುಸಾರವಾಗಿ ಶಿಕ್ಷೆ ಅಥವಾ ಪ್ರತಿಫಲ ವನ್ನನುಭವಿಸಬೇಕಾಗುತ್ತದೆಂಬ ವಿಚಾರದಲ್ಲಿ ಅದಕ್ಕೆ ವಿಶ್ವಾಸ ವಿದೆ. ಹಾಗೆಯೇ ಪ್ರತ್ಯಕ್ಷಾನುಭವವಿಲ್ಲದ ಸ್ವರ್ಗ ನರಕಗಳ ಕಲ್ಪನೆಯನ್ನು ವೀರಶೈವ ಧರ್ಮ ಪುರಸ್ಕರಿ ಸುವುದಿಲ್ಲ. ಈ ದೃಷ್ಟಿಯಿಂದ ಅದು ವೈಚಾರಿಕ ಧೋರಣೆ ಯುಳ್ಳ ವೈಜ್ಞಾನಿಕ ಧರ್ಮವೆಂದು ಹೇಳಲವಕಾಶವುಂಟು. ವೀಕ್ಷಣೆ ಪ್ರಯೋಗ ಪ್ರತ್ಯಕ್ಷಾನುಭವಗಳಿಗೆ ಒಳಪಡದ ಯಾವುದೇ ವಿಚಾರಕ್ಕೆ ವಿಜ್ಞಾನದ ಪಟ್ಟವನ್ನು ಕಟ್ಟಲಾಗದು. **'ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ; ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲಿಯೂ ಸಲ್ಲುವರು'** ಎಂಬುದಾಗಿ ಬಸವಣ್ಣನವರು ಹೇಳುತ್ತಾರೆ ನಿಜ. 'ಅಲ್ಲಿ' ಎಂದರೆ ಸ್ವರ್ಗವೆಂದು ಅರ್ಥಮಾಡುವವರು ಇಲ್ಲದಿಲ್ಲ. 'ಅಲ್ಲಿ'ಗೆ ಕೈಲಾಸವೆಂದು ಅರ್ಥ ಕಲ್ಪಿಸಬಹುದೆ? ಅಂಥವರು ಶಿವನಿಗೆ ಹಿತವಾಗುತ್ತಾರೆ; ಅಂದರೆ ಶಿವನಲ್ಲಿ ಒಂದಾಗುವ ಅರ್ಹತೆ ಪಡೆದಿರುತ್ತಾರೆ ಎಂದು ಅರ್ಥೈಸಿದರೂ ತಪ್ಪಾಗ ಲಾರದು.

*ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ*
*ಕಾಣಿಭೋ !*
*ಸತ್ಯವ ನುಡಿವುದೇ ದೇವಲೋಕ ; ಮಿಥ್ಯವ*
*ನುಡಿವುದೇ ಮರ್ತ್ಯಲೋಕ*

*ಆಚಾರವೇ ಸ್ವರ್ಗ; ಅನಾಚಾರವೇ ನರಕ*
*ಕೂಡಲಸಂಗಮದೇವಾ, ನೀವೇ ಪ್ರಮಾಣು*
*ಪುಣ್ಯ ಪಾಪವೆಂಬುವು ತಮ್ಮ ಇಷ್ಟವು ಕಂಡಿರೆ ;*
*ಅಯ್ಯಾ ಎಂದಡೆ ಸ್ವರ್ಗ; ಎಲವೋ ಎಂದಡೆ ನರಕ.*

ಬಸವಣ್ಣನವರ ಸ್ವರ್ಗ ನರಕಗಳ ಈ ಕಲ್ಪನೆ ಎಂಥ ಶ್ರೀಸಾಮಾನ್ಯನಿಗೂ ಅರ್ಥವಾಗುತ್ತದೆ. ವೈಜ್ಞಾನಿಕಮತಿಗೂ ಹಿಡಿಸುತ್ತದೆ. ಮಾನವನ ಮನಸ್ಸೇ ಸ್ವರ್ಗ ನರಕಗಳ ಮೂಲ ವೆಂಬುದು ಅವರ ಈ ವಚನದಿಂದ ವೇದ್ಯವಾಗುತ್ತದೆ. ವಿಶ್ವದಲ್ಲಿ ಗ್ರಹಗಳಿವೆ, ನಕ್ಷತ್ರಗಳಿಗೆ, ಧೂಮಕೇತುಗಳಿವೆ, ಎಂಬುದನ್ನು ವಿಜ್ಞಾನಿಗಳು ಬಲ್ಲರು. ಆದರೆ ಅವರು ಈ ತನಕ ಸ್ವರ್ಗನರಕ ಲೋಕಗಳನ್ನು ಗುರುತಿಸಲಾಗಿಲ್ಲ. ತಮ್ಮ ಅನುಭವಕ್ಕೆ ಬರೆದ ಸಂಗತಿಯನ್ನು ಬಣ್ಣ ಕಟ್ಟಿ ವಿವರಿಸುವ ಅಪ್ರಮಾಣಿಕರಲ್ಲ ಬಸವಣ್ಣನವರು. ನಿಸರ್ಗ ನಿಯಮದಂತೆ ಧರ್ಮಕ್ಕೆ ವಿರೋಧವಾಗದಂತೆ ಮಾನವ ಭೂಮಿ ಕೊಡುವ ಸುಖವನ್ನನುಭವಿಸಬಹುದೆಂದು ಮಹಮ್ಮದರಂತೆ ಬಸವೇಶ್ವರರೂ ಅಭಿಪ್ರಾಯಪಡುತ್ತಾರೆ.

ಜಗತ್ತಿನ ಸಚರಾಚರ ವಸ್ತುಗಳೆಲ್ಲ ಭಗವಂತನ ಅಂಶ ಗಳೆಂಬ, ಪೂರ್ಣದಿಂದ ಬಂದದ್ದು ಪೂರ್ಣವೆಂಬ ಆರ್ಷ ದರ್ಶನವನ್ನು ಬಸವಣ್ಣನವರು ಒಪ್ಪಿಕೊಳ್ಳುತ್ತಾರೆ. ಗಿಡದಿಂದ ಲಭಿಸಿದ ಕಾಳಿನಲ್ಲಿ ಗಿಡ ಅಡಗಿರುವುದರಿಂದ ಕಾಳೂ ಪೂರ್ಣವೇ ಸರಿ. ಬಾಳೆಗೊನೆಯಲ್ಲಿರುವ ಒಂದೊಂದು ಕಾಯಿಯೂ ಪೂರ್ಣವೇ. ಒಂದು ಹನಿ ನೀರಿನಲ್ಲಿ ಕೂಡ ನೀರಿನ ಗುಣಗಳೆಲ್ಲ ಇವೆ. ಸಮುದ್ರದಿಂದ ಆವಿಯ ಮೂಲಕ ಮುಗಿಲಾಗಿ, ಮುಗಿಲು ಮಳೆಯ ರೂಪದಲ್ಲಿ ಭೂಮಿಯ ಮೇಲೆ ಬಿದ್ದು ಹರಿದು ಮತ್ತೆ ಸಾಗರವನ್ನು ಸೇರುವಂತೆ, ಆತ್ಮ ಪರಮಾತ್ಮನಲ್ಲಿ, ಅಂದರೆ ಅಂಗ ಲಿಂಗದಲ್ಲಿ ವಿಲಯನ ಗೊಳ್ಳುವುದು ನಿಸರ್ಗ ಸಹಜ ಧರ್ಮ. ಸಾಧನೆ ಇಲ್ಲದೆ ಆ ವಿಲಯನ ಸಾಧ್ಯವಿಲ್ಲ. ಸಾಧನೆಯ ವಿವಿಧ ಸೋಪಾನ

* ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಗಳೇ ಷಟ್ಸ್ಥಲಗಳು, ಲಿಂಗಾಂಗ ಸಾಮರಸ್ಯವೇ ಷಟ್ಸ್ಥಲ ಸಿದ್ಧಾಂತದ ಪರಮ ಗಂತವ್ಯ. ವೀರಶೈವ ಧರ್ಮದ ಈ ದರ್ಶನ ಇಸ್ಲಾಂ ಧರ್ಮದಲ್ಲಿಲ್ಲ. ಎರಡು ಧರ್ಮಗಳಲ್ಲಿಯೂ ಪ್ರಾರ್ಥನೆಗೆ ಅಸೀಮವಾದ ಸ್ಥಾನವಿದೆ. ಅದು ಜಗತ್ತಿನ ಸಕಲ ಧರ್ಮಗಳ ಪ್ರಾಣಶಕ್ತಿಯಾಗಿದೆ.

ಮಹಮ್ಮದರು ಅವಕಾಶ ಸಿಕ್ಕಿದಾಗಲೆಲ್ಲ ಪಹರೆಗಟ್ಟಳೆ ಪ್ರಾರ್ಥನಾ ನಿರತರಾಗುತ್ತಿದ್ದರು. ಮಧ್ಯರಾತ್ರಿಯ ಬಳಿಕ ಅಲ್ಲಾಹನೆದುರು ಅವರು ಮಾಡುತ್ತಿದ್ದ ಪ್ರಾರ್ಥನೆಯಲ್ಲಿ ಅಲ್ಲಾಹನ ಏಕತ್ವದ ಘೋಷಣೆ ಇದೆ; ತನ್ನ ದಾಸ್ಯದ ಪ್ರಕಟಣೆ ಇದೆ, ದೇವನಿಗೆ ಪ್ರಶಂಸೆ ಇದೆ, ದೇವನಿಗೆ ಕೃತಜ್ಞತೆ ಇದೆ, ದೇವಗುಣಗಳ ವಿವರಣೆ ಇದೆ, ದೇವನ ಮೇಲಿನ ನಂಬಿಕೆ, ವಿಶ್ವಾಸ ಮತ್ತು ಭರವಸೆಯ ಅಭಿವ್ಯಕ್ತಿ ಇದೆ. ಕೊನೆಯಲ್ಲಿ ಕ್ಷಮಾಯಾಚನೆಯೂ ಇದೆ. ಒಟ್ಟಿನಲ್ಲಿ ಅಲ್ಲಾಹನೊಂದಿಗೆ ಸರಿಯಾದ ಬುನಾದಿಯಲ್ಲಿ ಸಂಬಂಧ ಸ್ಥಾಪಿಸಲು ಬೇಕಾದ ಎಲ್ಲ ಅಂಶಗಳೂ ಇವೆ. 'ಭಕ್ತಿಪಂಥದ ಹೊನಲಿನಲ್ಲಿ ಈಜಾಡುತ್ತಿದ್ದ ಬಸವಣ್ಣನವರಿಗೆ ಪ್ರಾರ್ಥನೆ ಉಸಿರಾಗಿತ್ತು. ಶಿವಸಾಕ್ಷಾತ್ಕಾರವೇ ಅವರ ಪ್ರಾರ್ಥನೆಯ ಗುರಿ. **'ಅಯ್ಯಾ, ಅಯ್ಯಾ ಎಂದು ಕರೆವುತ್ತಲಿದ್ದೇನೆ. ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ. ಓ ಎನ್ನಲಾಗದೆ ಅಯ್ಯಾ?'** ಎಂದವರು ಅನುಕ್ಷಣವೂ ಹಂಬಲಿಸುತ್ತಾರೆ. **'ಅಕಟಕಟಾ ಶಿವ ನಿನಗಿನಿತು ಕರುಣವಿಲ್ಲ'** ಎಂದು ಕೊರಗುತ್ತಾರೆ.

*ಅಂಗಯ್ಯೊಳಗಣ ಲಿಂಗವ ನೋಡುತ್ತ*
*ಕಂಗಳು ಕೋಡಿವರಿಯುತ್ತ ಸುರಿಯುತ್ತ ಎಂದಿಪ್ಪೆನೊ?*
*ನೋಟವೆ ಪ್ರಾಣವಾಗಿ ಎಂದಿಪ್ಪೆನೊ?*
*ಕೂಟವೆ ಪ್ರಾಣವಾಗಿ ಎಂದಿಪ್ಪೆನೊ?*
*ಎನ್ನ ಅಂಗವಿಕಾರದ ಸಂಗವಳಿದು,*
*ಕೂಡಲಸಂಗಯ್ಯಾ, ಲಿಂಗ ಲಿಂಗವೆನ್ನುತ್ತ*
*ಎದೆ ಬಿರಿವನ್ನಕ್ಕ, ಮನ ದಣಿವನ್ನಕ್ಕ*
*ನಾಲಗೆ ನಲಿನಲಿದೋಲಾಡುವನ್ನಕ್ಕ*
*ನಿಮ್ಮ ನಾಮಾವೃತವ ತಂದೆರೆಸು ಕಂಡಯ್ಯಾ*
*ಎನಗೆನ್ನ ತಂದೆ !*
*ಬಿರಿ ಮುಗುಳಂದದಿ ಎನ್ನ ಹೃದಯ*
*ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ,*
*ಕೂಡಲಸಂಗಮದೇವಾ*

ಇವು ಭಾವಪೂರ್ಣ ಭಕ್ತಿಯುಕ್ತ ಅಪೂರ್ವ ಪ್ರಾರ್ಥನೆ.

ಬಸವಣ್ಣನವರ ವಚನಗಳಲ್ಲಿ ಅವರ ಆತ್ಮಕಥೆ, ವಿಶೇಷವಾಗಿ ಆತ್ಮನ ಹೊಯ್ದಾಟ ಹಾಸುಹೊಕ್ಕಾಗಿ ಹರಿದಿದೆ. ಜಗತ್ತಿನ ಶ್ರೇಷ್ಠ ಸಂತರಲ್ಲಿ ಕಾಣುವ ತವಕ ಕಾತರತೆ ಇರಲು ವಿರಹಸಂಕಟ, ನಿಂದಾಸ್ತುತಿ, ಛಲ, ಸಂಕಲ್ಪ, ಯಾತನೆ, ಆತ್ಮನಿಂದೆ, ದಾಸೋಹಂಭಾವ ಕೊರಗು- ಇವೇ ಮೊದಲಾದ ಭಾವ ತುಮುಲವನ್ನು ಆರ್ತನಾದವನ್ನು ಗಾಢಾನುರಕ್ತಿಯನ್ನು ಬಸವಣ್ಣನವರಲ್ಲಿ ಪೂರ್ಣಪ್ರಮಾಣದಲ್ಲಿ ನೋಡಬಹುದು. **'ಹುಟ್ಟಿತ್ತೆ ತಪ್ಪಾಯಿತ್ತೆ ಎಲೆ ಲಿಂಗವೆ?' 'ತಾಯ ಮೊಲೆಹಾಲು ನಂಜಾಗಿ ಕೊಲುವಡೆ ಇನ್ನಾರಿಗೆ ದೂರುವೆನಯ್ಯಾ, ಕೂಡಲ ಸಂಗಮದೇವಾ?' 'ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ;, ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ, ಎಲ್ಲೊಳಗೇನೂ ಶುದ್ಧವಿಲ್ಲ ನೋಡಯ್ಯ', ತನ್ನ ವಿಚಾರಿಸಲೊಲ್ಲದು, ಇದಿರ ವಿಚಾರಿಸ ಹೋಹುದೀ ಮನವು ! ಏನು ಮಾಡುವೆನೀ ಮನವನು ! 'ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ', 'ಕೆಸರಲ್ಲಿ ಬಿದ್ದ ಬಡ ಪಶುವಿನಂತೆ ಆನು ದೆಸೆದೆಸೆಗೆ ಬಾಯಿ ಬಿಡುತ್ತಿದ್ದೆನಯ್ಯ!' 'ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯಬಿಟ್ಟಡೆ ನಿಮ್ಮ ನಗುವರಯ್ಯ'**- ಇವು ಅವರ ಅಂತರಂಗದ ಹೊಯ್ದಾಟದ ಹಲವು ಮುಖಗಳಲ್ಲಿ ಕೆಲವು ಮಾತ್ರ. ಎದುರಾಗಿ ಬಂದ ಆಶೆ ಅಮಿಷಗಳನ್ನು ಮೋಹ ಮಾಯೆಗಳನ್ನು ಗೆದ್ದ ನಂತರ ಹೊಯ್ದಾಟ ನಿಂತು, ಚಿತ್ತ ನಿರ್ಮಲವಾಗಿ ಶಿವನಲ್ಲಿ ನೆಲಸುತ್ತದೆ. ಹೀರಾಗುಡ್ಡದ ಗುಹೆಯಲ್ಲಿ ಧ್ಯಾನಸ್ಥರಾಗಿದ್ದ ಮಹಮ್ಮದರು ಸಹ ಮೇಲಣ ಅವಸ್ಥೆಗಳನ್ನೆಲ್ಲ ದಾಟಿರಬೇಕೆಂದು ತೋರುತ್ತದೆ. ಲೋಕ ಕಾರುಣ್ಯ ಇಂಥ ಸಂತರ ಬದುಕಾಗುತ್ತದೆ.

ಸ್ತ್ರೀ ಸಮಾನತೆಯನ್ನು ಮಾನ್ಯ ಮಾಡುವ ದೃಷ್ಟಿಯಿಂದ ಇಸ್ಲಾಂ ಧರ್ಮ ಹಿಂದೂ ಧರ್ಮಕ್ಕಿಂತ ತುಸು ಪಾಲು ಮೇಲೆನ್ನುವುದರಲ್ಲಿ ಸಂಶಯವಿಲ್ಲ. ಆಧ್ಯಾತ್ಮವನ್ನೊಳಗೊಂಡು ಜೀವನದ ಸಕಲ ಕ್ಷೇತ್ರಗಳಲ್ಲಿಯೂ ಸ್ತ್ರೀಗೆ ಸರ್ವಸಮಾನತೆ ಸರ್ವಸ್ವಾತಂತ್ರ್ಯಗಳನ್ನು ಹನ್ನೆರಡನೆಯ ಶತಮಾನದಲ್ಲಿಯೇ ಬಸವಣ್ಣನವರು ನೀಡಿದ ಸಂಗತಿ, ಆಧುನಿಕ ಕಾಲದ ಪಾಶ್ಚಾತ್ಯ ಚಿಂತಕರಿಗೂ ಆಶ್ಚರ್ಯ





ಕಾಣಿಸುವವರು ಇವರೇ ಬೇರೇ ಯಾರೂ ಅಲ್ಲ. ಅಂಥ ಬೇಜವಾಬ್ದಾರಿಯ ವರ್ತನೆಯನ್ನು ಕಂಡೂ ಪಾಲಕರು ಕಣ್ಮುಚ್ಚಿಕೊಂಡು ಕುಳಿತಿರುವುದು ಅದೆಷ್ಟು ಸರಿ ? ದೇಶಕ್ಕೆ ಇವರಿಂದ ಯಾವ ಲಾಭವಾದೀತು? ಎಂಬುದನ್ನು ಚಿಂತನೆ ಮಾಡಬೇಕಾಗಿದೆಯಲ್ಲವೆ ?

ಸಾಮಾನ್ಯವಾಗಿ ನಾವೀಗ ಆಚರಿಸುತ್ತಿರುವ ಜೀವನದ ಕೆಲವು ಪ್ರಮುಖ ಘಟನೆಗಳನ್ನು ನೆನಪಿಸಿಕೊಂಡರೆ ನಮ್ಮ ಧರ್ಮ ಸಂಸ್ಕೃತಿಗಳ ಪಥ ಎತ್ತ ಸಾಗುತ್ತಿದೆಯೆಂಬುದರ ಅರಿವು ನಮಗಾಗಬಹುದು. ಪ್ರತಿಯೊಬ್ಬನಿಗೂ ನೀರು, ವಾಯು, ಆಹಾರ, ವಸ್ತ್ರ ವಸತಿ ಇವು ಅತ್ಯಗತ್ಯವಾದವುಗಳೇನೋ ನಿಜ; ಆದರೆ ಈ ಸಂಪನ್ಮೂಲಗಳನ್ನು ಮಿತಿ ಮೀರಿ ಬಳಕೆ ಮಾಡುತ್ತ ಹಾನಿಯನ್ನುಂಟು ಮಾಡುವ ಪಥವನ್ನು ಹಿಡಿದು ಕ್ರಮಿಸುವ ಜನರೇ ಹೆಚ್ಚು. ಬಸವಣ್ಣನವರು ಇಂದಿಂಗೆ ನಾಳಿಂಗೆ ಎಂದೆನ್ನದೇ ಜೀವನ ಸಾಗಿಸಬೇಕೆಂಬುದಾಗಿ ತಮ್ಮ ವಚನಗಳ ಮುಖಾಂತರ ಸಾರಿ ಸಾರಿ ಹೇಳಿದ್ದರೂ ನಾವು ಅವನ್ನು ಅರ್ಥೈಸಿಕೊಳ್ಳುತ್ತಿಲ್ಲ. ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡು ಪೇಚಾಡುತ್ತಲಿದ್ದೇವೆ.

ಕಳೆದೈದು ದಶಕಗಳ ಹಿಂದೆ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಮತ್ತಿತರ ರಾಷ್ಟ್ರ ನಾಯಕರು ಸರಳ, ಸಾದಾ ಜೀವನದೊಂದಿಗೆ ಭವ್ಯ ಭಾರತವನ್ನು ಮುಕ್ತಗೊಳಿಸಲು ಬ್ರಿಟಿಷರ ವಿರುದ್ಧ ಹೋರಾಡಿ ಸ್ವಾತಂತ್ರ್ಯ ಗಳಿಸಿಕೊಟ್ಟರು. ಇದು ನಮಗೆಲ್ಲ ಗೊತ್ತಿದ್ದರೂ ಅವರ ಜೀವನದ ತಿರುಳು, ತತ್ತ್ವಗಳ ಅರಿವು ಮತ್ತು ಅವರ ಸಂದೇಶಗಳನ್ನರಿಯದೇ, ಅಂಥವರ ಆದರ್ಶ ಬದುಕಿನ ಸೂತ್ರಗಳನ್ನು-ವಿಚಾರಗಳನ್ನು ಅಲ್ಲಗಳೆದು ಪಾಶ್ಚಾತ್ಯರ ಸಂಸ್ಕೃತಿಯನ್ನೇ ಅನುಕರಿಸಿ ಮುಂದುವರೆದಿದ್ದೇವೆ. 'ಖಾದಿಯೆಂದರೆ ಸ್ವರ್ಗದ ಹಾದಿ' ಯೆಂದು ಬಗೆದ ಗಾಂಧೀಜಿಯವರ ತತ್ತ್ವವನ್ನು ಇಂದಿನ ರಾಜಕಾರಣಿಗಳು ಖಾದಿ ತೊಟ್ಟರೂ ಅದರ ಮೂಲ ಆಶಯದಂತೆ ನಡೆಯುತ್ತಿಲ್ಲವೆಂಬುದು ಸೂರ್ಯನಷ್ಟೇ ಸತ್ಯ

ಇಂದಿನ ಆಧುನಿಕ ಯುಗದಲ್ಲಿ ಹೆಚ್ಚಾಗಿ ಬೆಳೆಯುತ್ತಲಿರುವ ಮಕ್ಕಳ ಭವಿಷ್ಯಕ್ಕೆ ಪಾಲಕರೇ ಹೊಣೆಗಾರರೆಂಬ ಮಾತು ಸುಳ್ಳಲ್ಲ. ಮಕ್ಕಳ ಭವಿಷ್ಯವೂ ಇವರ ಕೈಯಲ್ಲಿದೆ. ಉತ್ತಮ ಸಂಸ್ಕೃತಿಯ ನಿರ್ವಹಣೆಯು ಇವರಿಂದಲೇ ಆಗಬೇಕು. ಮನೆಗೆ ಮಕ್ಕಳು ಹೇಗೆ ಅಂದವೋ ಹಾಗೆಯೇ ಅಂಥ ಮನೆಗೊಂದು ಗ್ರಂಥಾಲಯವಿದ್ದರೆ ಮತ್ತಷ್ಟು ಶೋಭೆ ತರುತ್ತದೆ. ಒಳ್ಳೆಯ ಪುಸ್ತಕಗಳನ್ನೊಳಗೊಂಡ ಗ್ರಂಥಾಲಯವಿದ್ದಲ್ಲಿ ಮಕ್ಕಳ ಮನಸ್ಸಿನ ಮೇಲೆ ಒಳ್ಳೆಯ ಸಂಸ್ಕಾರದ ಪರಿಣಾಮ ಬೀರಬಲ್ಲದು. ಅಂತೆಯೇ ಸಿಸಿರೋ ಎಂಬ ತತ್ತ್ವಜ್ಞಾನಿ ಹೀಗೆ ಹೇಳಿದ್ದಾನೆ. ' A room without books is a body without soul' ಅಂದರೆ 'ಪುಸ್ತಕವಿಲ್ಲದ ಕೋಣೆ ಆತ್ಮವಿಲ್ಲದ ದೇಹ ವಿದ್ದಂತೆ' ಇದರಿಂದ ಒಳ್ಳೆಯ ಸಂಸ್ಕೃತಿ ನಿರ್ಮಾಣವಾಗಲು ಸಾಧ್ಯವಾಗುತ್ತದೆ. ಒಳ್ಳೆಯ ಸಂಸ್ಕೃತಿಯ ಪರಿಸರದಿಂದ ಮಾನವನು ಒಳ್ಳೆಯ ಸಮಾಜ ಕಟ್ಟಲು ಪೂರಕವಾಗುತ್ತದೆ. 'A man without culture like an animal' ಎಂಬ ಆಂಗ್ಲಗಾದೆ ಇದನ್ನೇ ಹೇಳುತ್ತದೆ.

ಇಂದಿನ ಮಕ್ಕಳಲ್ಲಿ ಓದಿನ ಕಡೆಗೆ ಗಮನ ಕಡಿಮೆಯಾಗುತ್ತಿದ್ದು ಟಿ.ವಿ.ಯ ದಾಸರಾಗಿದ್ದಾರೆ. ಭವಿಷತ್ತಿನ ಬಗೆಗೆ ಚಿಂತೆಯಿಲ್ಲ. ಕಾಳಜಿಯಿಲ್ಲ, ಇಂದಿನ ಯುವಕರಲ್ಲಿ ಚಿಂತನಶೀಲದ ಕೊರತೆ ಎದ್ದು ಕಾಣುತ್ತದೆ. ದೇಶದ ಬಗ್ಗೆ ಗೌರವ, ಅಭಿಮಾನ ವಿಲ್ಲದಂತಾಗಿದೆ. ದೇಶದ ಬಗೆಗಿನ ಚಿಂತನ ಮಂಥನವಾಗಬೇಕು. ಹೊಸ ಹೊಸ ಪ್ರಯೋಗ ದೊಂದಿಗೆ ಉತ್ತಮವಾದ ಗುಣಮಟ್ಟದಿಂದ ಕೂಡಿದ ಶಿಕ್ಷಣದ ಪ್ರಸಾರವಾಗಬೇಕು. ಇಂದು ಅಗತ್ಯವೂ ಆಗಿದೆ. ಯಾಕೆಂದರೆ ರಾಷ್ಟ್ರದ ಭವಿತವ್ಯ ಬರುತ್ತಿರುವ ಇಂದಿನ ಯುವಕರ ಮೇಲೆ ಅವಲಂಬಿತವಾಗಿದೆ.

'Youth peoples are the wealth of the nation' ಎಂಬಂತೆ ಒಳ್ಳೆಯದರ ಕಡೆಗೆ ಬೆನ್ನು ಹತ್ತಿದ ಯುವಕರ ಪಡೆಯಿಂದು ಬೇಕಾಗಿದೆ. ಭವ್ಯ ಭಾರತದ ನಿರ್ಮಾಣಕ್ಕೆ ಯುವಕರು ಆಸಕ್ತಿ ವಹಿಸಬೇಕಾಗಿದೆ. ದೇಶದ ಮೇಲೆ ಎರಗುತ್ತಿರುವ ದುಷ್ಟಶಕ್ತಿಗಳ ಅಟ್ಟಹಾಸವನ್ನು ಮಟ್ಟ ಹಾಕಲು ಇದರಿಂದ ಅನುಕೂಲವಾಗುತ್ತದೆ. ದೇಶವಿಂದು ಅಪಾಯದ ಅಂಚಿನಲ್ಲಿದೆ. ಭಯೋತ್ಪಾದನೆಯಂತಹ ಕೃತ್ಯಗಳು ಮಾನವನ ನೆಮ್ಮದಿಯನ್ನೇ ಕಿತ್ತು ಹಾಕಿದೆ. ಆದರೆ ನಾವಿಂದು ಇದರಿಂದ ಮುಕ್ತವಾಗಬೇಕಾದರೆ ಹೊಸದೊಂದು ಸಂಕಲ್ಪ ಶ್ರದ್ಧೆ, ಸ್ವಾಭಿಮಾನ-ಅಭಿಮಾನಗಳನ್ನು ಮೈಗೂಡಿಸಿಕೊಳ್ಳಬೇಕಾಗಿದೆ. ಬದಲಾಗುವ ಪ್ರಕೃತಿ ಯೊಂದಿಗೆ ಗಾಂಧೀಜಿ ಯವರು ಕಂಡ ಕನಸಿನ ಭಾರತವನ್ನು ನನಸು ಮಾಡುವಲ್ಲಿ ನಮ್ಮೆಲ್ಲರ ಮನಸ್ಸುಗಳ ಸನ್ನದ್ಧ ವಾಗಬೇಕು. ಅಂತಹ ಚಿಂತನೆಗಳತ್ತ ನಾವೆಲ್ಲ ಹೆಜ್ಜೆ ಹಾಕಿದರೆ ಮತ್ತೆ ಭಾರತಕ್ಕೆ ಭವಿಷ್ಯವಿದೆ. ಅಂಥ ಸಾಹಸವನ್ನು ನಾವೆಲ್ಲರೂ ಒಂದಾಗಿ ಮುಂದೆ ಸಾಗಬೇಕು.

*

## ಜೀವನದ ಗುರಿ

–ಡಾ|| ಸರ್ವಪಲ್ಲಿ ರಾಧಾಕೃಷ್ಣನ್

ಜೀವನವನ್ನು ಇದ್ದಕ್ಕಿದ್ದಂತೆ ಒಪ್ಪಬೇಕೆನ್ನುವುದು ಮಾನವ ಸ್ವಭಾವಕ್ಕೆ ಒಗ್ಗದ ವಿಷಯ. ಮನುಷ್ಯನಿಗೆ ಅದರಿಂದ ತೃಪ್ತಿಯಿಲ್ಲ. ಆತನ ಎದೆಯಲ್ಲಿ ಹುದುಗಿಸಿ ಕೊಂಡಿರುವ ಒಂದು ಶಕ್ತಿಯು ಆತನನ್ನು ಮುಂದೆ ಸಾಗುವಂತೆ ನಿರಂತರವೂ ಪ್ರೇರೇಪಿಸುತ್ತಿರುತ್ತದೆ.

ಇರುವ ರೀತಿಯಲ್ಲಿಯೇ ಜಗತ್ತನ್ನು ಕಾಯ್ದಿರಿಸುವುದು ಜೀವನದ ಅಂತಿಮ ಗುರಿಯಿಲ್ಲ. ಜಗತ್ತು ಮೇಲಕ್ಕೆ ಬರ ಬೇಕಾಗಿದೆ. ಯೋಗ್ಯ ರೀತಿಯಲ್ಲಿ ಬದುಕು ವ್ಯಕ್ತಿತ್ವದ ಪರಿಪೂರ್ಣತೆಯನ್ನು ಸಾಧಿಸಬೇಕೆಂದು ಪ್ರತಿಯೊಬ್ಬ ಮನುಷ್ಯನೂ ಬಯಸುತ್ತಾನೆ. ಜೀವನವನ್ನು ಇರುವಂತೆ ಒಪ್ಪಿ ಹೆಚ್ಚಿನ ಸಾಹಸಕ್ಕೆ ತೊಡಗುವುದೇ 'ನೈತಿಕಪ್ರಗತಿ' ಯಾಗಿದೆ.

ಹಿಂದಿನ ಜೀವನದ ಬಗೆಗಳನ್ನು ಈಗ ಪುನರುಚ್ಚರಿಸುತ್ತ ಕೊಡಬೇಕಾದುದಿಲ್ಲ. ಹಾಗೆ ಶಕ್ಯವಾಗಬಹುದಾದರೂ ಅದು ಉಚಿತವೆನಿಸಲಾರದು. ರಜಪೂತ ಯೋಧನ ಇಲ್ಲವೆ ಮಧ್ಯ ಯುಗದ ಸರದಾರನ ರೀತಿ ನೀತಿಗಳು ಆಧುನಿಕ ಕಾಲಕ್ಕೆ ಹೊಂದಿಕೆಯಾಗಲಾರವು. ಬದಲಾಗದಂಥ ಪರಿಸ್ಥಿತಿ ಸುತ್ತಮುತ್ತಲೂ ಇದೆಯೆಂದರೂ ಕೂಡ ನಮ್ಮ ಸಮಸ್ಯೆ ಅಲ್ಲಿಗೇ ಮುಗಿಯಲಿಲ್ಲ. ಯಾಕೆಂದರೆ ನಮ್ಮ ಆದರ್ಶಗಳು ಸದಾವಕಾಲವೂ ಬದಲಾವಣೆ ಹೊಂದುತ್ತಲೇ ಇರುತ್ತವೆ. ಆದುದರಿಂದ ಜೀವನಕ್ಕೆ ನಾವು ಹೊಂದಿಕೊಳ್ಳುವುದಲ್ಲದೆ ನಮ್ಮ ಆದರ್ಶಗಳಿಗೆ ತಕ್ಕಂತೆ ಜೀವನವನ್ನು ಮಾರ್ಪಡಿ ಸುವುದೇ ನೈತಿಕ ಜೀವನದ ತಿರುಳಾಗಿದೆ.

ಇರುವ ರೀತಿಯಲ್ಲಿಯೇ ಜೀವನವನ್ನು ಒಪ್ಪುವುದು ಒಂದು ದೃಷ್ಟಿಯಿಂದ ಪರಿಪೂರ್ಣವಾಗಿ ತೋರಬಹುದು. ಆದರೆ ಅದು ಮಾನವ ಪರಿಪೂರ್ಣತೆಯಲ್ಲ. ಜೀವನಕ್ಕೆ ಹೊಂದಿಕೊಳ್ಳುವುದರಲ್ಲಿಯೂ ಒಂದು ಬಗೆಯ ಸೊಗಸು ಇದೆ. ಆದರೆ ಆ ಹೊಂದಿಕೆಯು ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ಈ ವೈವಿಧ್ಯಮಯ ಜಗತ್ತಿನಲ್ಲಿ ಬಹುಕಾಲ ಬಾಳಲಾರದು.

ಜೀವನದ ಹಾದಿಯಲ್ಲಿ ವಿಶ್ರಾಂತಿ ಸ್ಥಳವೊಂದೂ ಇಲ್ಲ. ಒಂದೊಂದು ಸಾಧನೆಯೂ ಹೊಸ ಸಾಹಸಕ್ಕೆ ಪ್ರಚೋದನೆ ಕೊಡುವುದೇ ಆಗಿದೆ. ನೆಲಕ್ಕೆ ಹೊಂದಿಕೊಂಡ ಕಲ್ಲು ಮಣ್ಣಿನಂತೆ, ಜೀವನಕ್ಕೆ ಹೊಂದಿಕೊಳ್ಳುವುದಿಲ್ಲ. ಏರಬೇಕಾಗಿರುವ ಒಂದು ಎತ್ತರಕ್ಕೆ ಜಗತ್ತನ್ನು ಎತ್ತರಿಸು ವವರೆಗೆ ಸಾಹಸ ಪಡುವುದೇ ಜೀವನದ ಚರಮ ಗುರಿ.

### ಧರ್ಮಶಿಕ್ಷಣ

ರಾಜ್ಯ ಮತಧರ್ಮದಲ್ಲಿ ಆಸಕ್ತಿ ವಹಿಸಬಲ್ಲುದೆಂದಾಗಲಿ ಅದರ ಶಿಕ್ಷಣವನ್ನು ಕೈಕೊಳ್ಳಬಲ್ಲುದೆಂದಾಗಲಿ ನಾನು ನಂಬುವುದಿಲ್ಲ. ಮತೀಯ ಶಿಕ್ಷಣವು ಮುಖ್ಯವಾಗಿ ಧರ್ಮ–ಸಂಸ್ಥೆಗಳಿಗೆ ಸಂಬಂಧಪಟ್ಟಿರಬೇಕು. ಮತಧರ್ಮವನ್ನೂ ನೀತಿಯನ್ನೂ ಬೆರೆಸಬಾರದು. ಮೂಲಭೂತವಾದ ನೀತಿಯು ಎಲ್ಲ ಮತ ಧರ್ಮಗಳುಗೂ ಸಾಮಾನ್ಯವಾದುದೆಂದು ನಾನು ನಂಬಿದ್ದೇನೆ. ಮೂಲಭೂತವಾದ ನೀತಿಯನ್ನು ಕಲಿಸುವುದು ನಿಸ್ಸಂಶಯವಾಗಿ ರಾಜ್ಯದ ಕಾರ್ಯ, ಧರ್ಮ ಎಂದು ಹೇಳುವಾಗ ಇಲ್ಲಿಮೂಲಭೂತವಾದ ನೀತಿ ಎಂದು ನನ್ನ ಭಾವವಲ್ಲ; ಮತ ಎಂಬ ಹೆಸರಿನಲ್ಲಿ ಸೇರಿರುವುದು ಎಂಬರ್ಥ. ರಾಜ್ಯ ಸಹಾಯವುಳ್ಳ ಧರ್ಮಗಳ ಅಥವಾ ರಾಜಮತಗಳ ತೊಂದರೆಯನ್ನು ನಾವು ಸಾಕಾದಷ್ಟು ಅನುಭವಿಸಿದ್ದೇವೆ. ಒಂದು ಸಂಘ ಅಥವಾ ಗುಂಪು ತನ್ನ ಧರ್ಮದ ಅಸ್ತಿತ್ವಕ್ಕಾಗಿ ಸ್ವಲ್ಪವಾಗಿಯೋ ಪೂರ್ಣವಾಗಿಯೋ ರಾಜಾಶ್ರಯವನ್ನು ಹೊಂದಿದರೆ ಅದಕ್ಕೆ ಧರ್ಮವೆಂಬ ಹೆಸರು ಉಚಿತವಲ್ಲ ಅಥವಾ ಧರ್ಮದ ಹೆಸರಿಗೆ ತಕ್ಕ ಬೆಲೆ ಅದಕ್ಕಿಲ್ಲ. ಈ ಸತ್ಯ ನನಗೆ ಸ್ಪಷ್ಟವಾಗಿದೆ. ಇದನ್ನು ದೃಢಗೊಳಿಸುವ ದೃಷ್ಟಾಂಗಗಳನ್ನು ಕೊಡುವ ಅವಶ್ಯಕತೆಯಿಲ್ಲ.

–ಮಹಾತ್ಮ ಗಾಂಧೀಜಿ





ವಾಗದಿರದು, ಸವಾಲಾಗದಿರದು. ಈ ದೃಷ್ಟಿಯಿಂದ ಇಸ್ಲಾಂ ಹಿಂದೂ ಧರ್ಮಗಳಿರಲಿ, ಜಗತ್ತಿನ ಯಾವ ಧರ್ಮಗಳೂ ವೀರಶೈವ ಧರ್ಮದ ಎತ್ತರಕ್ಕೇರಲಾರವು.

ಇಸ್ಲಾಂ ಎಂಬ ಅರಬೀ ಪದಕ್ಕೆ ಸಮರ್ಪಣೆ, ಶರಣು, ವಿಧೇಯತೆ, ಶಾಂತಿ ಎಂಬ ಅರ್ಥಗಳಿವೆ. ದೇವರಿಗೆ ತನ್ನನ್ನು ಸಮರ್ಪಿಸಿಕೊಂಡು, ಧರ್ಮಸೂತ್ರಗಳ ಪ್ರಕಾರ ಜೀವನವನ್ನು ನಡೆಸಿದ್ದಾದರೆ ದೈಹಿಕ ಸ್ವಾಸ್ಥ್ಯವೂ ಆತ್ಮ ಶಾಂತಿಯೂ ನೆಲೆಗೊಳ್ಳುತ್ತವೆಂಬುದು ಪ್ರವಾದಿಗಳ ಇಚ್ಛೆ ಯಾಗಿತ್ತು. ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನಾದ ಶಿವ ಹೊರತು ಅನ್ಯದೇವರಿಲ್ಲ, ಮಾನವ ಅವನಿಗೆ ಶರಣಾ ಗುವುದಾದರೆ ಸರ್ವಮಂಗಳಗಳೂ ಲಭಿಸುತ್ತವೆನ್ನುವುದು ವೀರಶೈವ ಧರ್ಮದ, ಬಸವಣ್ಣನವರ ಸಂದೇಶದ ತಿರುಳು. ಏಕೈಕ ವ್ಯಕ್ತಿಯ ವಾಣಿ ಇಸ್ಲಾಂ ಧರ್ಮಕ್ಕೆ ಆಧಾರವಾದರೆ, ಪ್ರಜಾಸತ್ತೆಯ ನೀತಿಗನುಗುಣವಾಗಿ ವೀರಶೈವ ಧರ್ಮ ರೂಪಿತವಾಯಿತೆಂದು ಹೇಳಬಹುದಾದರೂ, ಬಸವಣ್ಣ ನವರ ಜೀವನ ಹಾಗೂ ಸಂದೇಶ ಅದಕ್ಕೆ ತಳಹದಿಯಾ ಯಿತೆಂಬುದು ಸುಸ್ಪಷ್ಟ. ಅಜ್ಞಾನ, ಮೌಢ್ಯ, ವಂಚನೆ, ಶೋಷಣೆ, ಅರಾಜಕತೆ, ಅಸಮಾನತೆ, ಅನ್ಯಾಯ, ಅನೀತಿ, ಅಶಾಂತಿ ದಾರಿದ್ರ್ಯಗಳಿಂದ ಸಮಾಜವನ್ನು ಮುಕ್ತಗೊಳಿಸಿ, ಐಕ್ಯ ಶಾಂತಿಗಳನ್ನು ನೆಲೆಗೊಳಿಸಿ, ಸರ್ವೋಚ್ಚ ಸಂಸ್ಕೃತಿ ಯನ್ನು ಹರಡುವುದೇ ಎರಡೂ ಧರ್ಮಗಳ ಉದ್ದೇಶ ವಾಗಿತ್ತು. ಜಗತ್ಕಲ್ಯಾಣದ ದೃಷ್ಟಿಯಿಂದ ಮತಾಂತರದ ಅಗತ್ಯವನ್ನು ಎರಡು ಧರ್ಮಗಳೂ ಒಪ್ಪಿಕೊಂಡಿವೆ. ಆಧುನಿಕ ವಿಚಾರದ ಬೆಳಕಿನಲ್ಲಿ ಎರಡೂ ಧರ್ಮಗಳ ಉತ್ತಮ ಸಾಮಾನ್ಯಾಂಶಗಳನ್ನು ಸ್ವೀಕರಿಸಿದ್ದಾದರೆ, ಜಗತ್ತಿ ನಲ್ಲಿ ಶಾಂತಿ ಸ್ಥಾಪನೆ ಸಾಧ್ಯವಾದೀತು. ಈ ಸಂದರ್ಭದಲ್ಲಿ ಬೌದ್ಧ ಕ್ರಿಸ್ತ ಧರ್ಮಗಳ ಉದಾತ್ತ ತತ್ತ್ವಗಳನ್ನು ಮರೆಯು ವಂತಿಲ್ಲ. ಮಹಮ್ಮದರು ಬಹುಮಟ್ಟಿಗೆ ತಮ್ಮ ಜೀವಿತೋ ದ್ದೇಶವನ್ನು ಸಾಧಿಸಿ, ದೇಹತ್ಯಾಗ ಮಾಡಿದರೆ, ಬುದ್ಧ ಕ್ರಿಸ್ತರಂತೆ ಬಸವಣ್ಣನವರು ಹುತಾತ್ಮರಾಗುತ್ತಾರೆ. ಆದರೆ ಅವರ ಆತ್ಮ ಜ್ಯೋತಿ ವಿರಾಟ್‌ಶಕ್ತಿಯಾಗಿ ಇಂದಿಗೂ ಜಗತ್ತನ್ನು ನಡೆಸುತ್ತಿದೆ; ಆ ಶಕ್ತಿಯೇ ಮಾನವನ ಭರವಸೆಯಾಗಿದೆ.

*

## ಸರ್ವಜ್ಞನ ವಚನಗಳು

*ಅರಿಯದೆಸಗಿದ ಪಾಪ । ಅರಿತರದು ತನಗೊಳಿತು,*
*ಅರಿತರಿತು ಮಾಡಿ ಮರೆತರದು, ನಯನವನು*
*ಇರಿದುಕೊಂಡಂತೆ ಸರ್ವಜ್ಞ ।*

ಈ ವಚನದ ತಾತ್ಪರ್ಯವೆನೆಂದರೆ, ಯಾವುದಾದರೂ ಒಂದು ಸಲ ಪರಿಸ್ಥಿತಿಗೆ ದಾಸನಾಗಿ ಅರಿಯದೆ ಪಾಪ ಮಾಡಿದರೂ ಅದು ತಪ್ಪಲ್ಲ! ತಪ್ಪು ಮಾಡುವುದು ಸಹಜ ಧರ್ಮ ಎಂದ ಮಾತ್ರಕೆ ಬರೇ ತಪ್ಪು ಮಾಡುವುದು ಸರಿಯಲ್ಲ. ಆದರೆ ತಿಳಿದು, ತಿಳಿದು ಮಾಡಿದ ತಪ್ಪೇ ಪುನಃ ಮಾಡಿದರೆ ತನ್ನ ಕಣ್ಣಿಗೆ ತಾನೇ ಇರಿದುಕೊಂಡು ಮೋಸ ಹೋದಂತೆಂದು ಸರ್ವಜ್ಞಮೂರ್ತಿಗಳು ಎಚ್ಚರಿಸಿದ್ದಾರೆ.

* * *

*ಊರಿಗೆ ದಾರಿಯನು । ಆರು ತೋರಿದಡೇನು ।*
*ಸಾರಾಯದ ನಿಜವ ತೋರುವ ಗುರುವು ತಾ ।*
*ನಾರಾದಡೇನು ಸರ್ವಜ್ಞ ।*

ಊರಿಗೆ ದಾರಿ ಗೊತ್ತಿರದ ವ್ಯಕ್ತಿಗೆ ಊರಿನ ದಾರಿ ಯನ್ನು ಇಂಥವರೇ ತೋರಿಸಬೇಕೆಂಬ ಯಾವ ನಿಯಮವಿಲ್ಲ. ಅಂಥ ಸಮಯದಲ್ಲಿ ಯಾರು ದಾರಿ ತೋರಿದರೂ ಸರಿಯೇ, ಯಾಕೆಂದರೆ ಅವನು ಊರು ತಲುಪಿದರೆ ಸಾಕಲ್ಲವೆ? ಅದೇ ರೀತಿ ಸತ್ಯದ ಅರಿವನ್ನು ತಿಳಿಸಿಕೊಡುವಂಥ ಗುರುವ ಎಂಥವನಿದ್ದರೇನು ? ಹೇಗಿದ್ದರೇನು ? ಇದಾವುದನ್ನೂ ಪರಿಗಣಿಸದೆ ಜ್ಞಾನ ಸಂಪಾದನೆ ಮಾಡುವುದೇ ನಮ್ಮ ಗುರಿಯಾಗಬೇಕು.

* * *

*ಗುರು ಮನುಜವೆಂದವಗೆ । ಹರನ ಶಿಲೆಯನೆಂದವಗೆ*
*ಕರುಣ ಪ್ರಸಾದವನು ಎಂಜಲೆಂದವನಿಗೆ*
*ನರಕ ತಪ್ಪುವುದೇ ಸರ್ವಜ್ಞ ।*

'ಗುರು' ಒಬ್ಬ ವ್ಯಕ್ತಿಯಲ್ಲ. ಮಹಾನ್ 'ಶಕ್ತಿ' ಎಂದೇ ಕರೆಯಬೇಕು. ಗುರುವನ್ನು ಅವನೊಬ್ಬ ಮನುಷ್ಯ ಎನ್ನುವವನಿಗೆ, ಕಲ್ಲಿನಲ್ಲಿ ಅರಳಿದ ಮಹಾದೇವನನ್ನು ಅದೊಂದು ಕಲ್ಲು ಎನ್ನುವವನಿಗೆ ಮತ್ತು ಪ್ರಸಾದವನ್ನು ಎಂಜಲು ಎಂದು ಹೀಯಾಳಿಸುವಂಥ ನರರಿಗೆ ನರಕ ತಪ್ಪಲಾರದು ಎಂದು ಎಚ್ಚರಿಸಿದ್ದಾರೆ.

–ರಮೇಶಬಾಬು ಯಾಳಗಿ, ಸುರಪುರ.



# ಬದಲಾಗುತ್ತಿರುವ ಭಾರತೀಯತೆ

-ಡಾ|| ಆರ್.ಬಿ. ಚಿಲುಮಿ *

ನಮ್ಮ ದೇಶ ಧರ್ಮ-ಸಂಸ್ಕೃತಿಗಳ ಸುಂದರ ತವರು ಮನೆ. ಧರ್ಮ, ದೇವರು, ಆಧ್ಯಾತ್ಮ, ನೀತಿ ತತ್ತ್ವ, ಕಾಯಕ ತತ್ತ್ವಗಳಂತಹ ವಿಚಾರಗಳಲ್ಲಿಯಂತೂ ನಾವು ಮುಂದಿದ್ದೇವೆ ಯೆಂದೆನಿಸಿದರೂ ಪ್ರಾಚೀನ ಕಾಲದಲ್ಲಿದ್ದಂತೆ ಇಂದಿಲ್ಲ. ಏಕೆಂದರೆ ನಾವಿಂದು ಕೆಲವು ರೂಢ-ಮೂಲ ಕಂದಾಚಾರಗಳ ದಾಸರಾಗಿದ್ದೇವೆ. ಮಹಾತ್ಮಾಗಾಂಧೀಜಿಯವರ ತತ್ತ್ವಗಳನ್ನಿಂದು ಗಾಳಿಗೆ ತೂರಿದ್ದೇವೆ. ಪಾಶ್ಚಾತ್ಯ ಸಂಸ್ಕೃತಿಯ ಗುಲಾಮರಾಗಿದ್ದೇವೆ.

ಮಹಾಕಾವ್ಯಗಳೆಂದೇ ಕರೆಯಿಸಿಕೊಂಡ ಭಗವದ್ಗೀತೆ, ರಾಮಾಯಣ, ಮಹಾಭಾರತ, ವೇದಾಗಮ ಪುರಾಣ-ಪುಣ್ಯ ಜೀವಿಗಳ ಕೊಡುಗೆ ಅಪಾರ ಹಾಗೂ ಅನುಭವ ಜನ್ಯವಾದುದು. ಇಂಥ ಶಾಸ್ತ್ರ ಸಮ್ಮತ ಕಾವ್ಯಗಳು ಹಾಲು -ಜೇನು- ಸವಿದಷ್ಟು ಆನಂದ ನೀಡುವಂಥಹವು. ಆದರೆ ನಾವಿಂದು ಇಂಥ ಆದರ್ಶ ಮಾರ್ಗ ಹಿಡಿಸುವಂಥಹ ಆದರ್ಶ ಕಾವ್ಯಗಳ ರಸಾಸ್ವಾದನೆಗೈಯಲು ಮಾರು ಹೋಗದೇ, ಅವೆಲ್ಲವೂ ಕಲ್ಪನೆಯಿಂದ ನಿರ್ಮಿತವಾದವು ಗಳೆಂದು ನಿರ್ಲಕ್ಷಿಸುತ್ತ, ಅಲ್ಲಗಳೆಯುತ್ತ ನಮಗೆ ತಿಳಿದಂತೆ ಓಡಾಡುತ್ತ, ಅನ್ಯಮಾರ್ಗವನ್ನು ತುಳಿಯುತ್ತ ಸಾಗುತ್ತಿದ್ದೇವೆ. ಎಲ್ಲವನ್ನೂ ಎಲ್ಲದಕ್ಕೂ ಚೇಷ್ಟೆಯ ಮಾರ್ಗಕ್ಕೆ ಒಯ್ದು, ಚಿಂತನೆಗೆ ಅವಕಾಶ ಕೊಡದೇ ಮನಸ್ಸಿಗೆ ತಂದುಕೊಳ್ಳದವ ರಾಗಿದ್ದೇವೆ. ಶಾಸ್ತ್ರೋಕ್ತವಾಗಿ ಶಾಸ್ತ್ರ ಗ್ರಂಥಗಳ ಬಳಿವಿಡಿದು ಇಂದಿನ ವಿಜ್ಞಾನ ಯುಗವು ಮುಂದುವರೆಯುತ್ತಿದೆ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಇದರಿಂದ ಭವ್ಯ ಭಾರತದ ನಿರ್ಮಾಣಕ್ಕೆ ವೈಜ್ಞಾನಿಕ ತಂತ್ರದ ಅಳವಡಿಕೆಯು ಅವಶ್ಯಕವಾದ ಸಾಧನೆಯೇನೋ ನಿಜ. ಆದರೆ **'ಸಕಲಕೆಲ್ಲಕೆ ಅಕಳಂಕ ಗುರು ನೀನೇ ದೇವಾ'** ಎನ್ನುವಂತೆ ಎಲ್ಲದಕ್ಕೂ ಪರಮಾತ್ಮನ ಅನುಗ್ರಹವೇ ಪ್ರಮುಖವಾದ ಪಾತ್ರ ವಹಿಸುತ್ತದೆಯೆಂಬುದನ್ನು ಭಾರತೀತರಾದ ನಾವು ಎಂದೂ ಮರೆಯಬಾರದು.

ಶರಣರು ದಾಸರು ಬಿತ್ತರಿಸಿದ ತತ್ತ್ವಾದರ್ಶಗಳನ್ನು ನಾವು ಅರಿತು ಆಚರಿಸದೇ ಕೇವಲ ಬಾಯಿ ಬಡುಕ ರಾಗಿದ್ದೇವೆ. ಅವರು ಜೀವನ ಸಾಗಿಸುವ ಒಳ ತಿರುಳುಗಳನ್ನು ಭಕ್ತಿಯ ಪಾರಮ್ಯದಲ್ಲಿಯೇ ಬೋಧಿಸಿ ಆಚರಿಸಿದ ಮಹಾಪುರುಷರವರು. ಅವರ ದಾರಿ ಕ್ರಮಿಸದೇ ನಾವು ಜೀವನವನ್ನು ಯಾತನೆಯ ನಡುಗಡಲು ಆಗಿಸಿಕೊಂಡಿದ್ದೇವೆ. ಭಕ್ತಿ-ಭಾವನೆ, ದೈವ-ದೇವರು, ಧರ್ಮ-ನೀತಿ- ದಯೆ-ದಾಕ್ಷಿಣ್ಯತೆಗಳು ಇಂದು ನಶಿಸಿ ಹೋಗುತ್ತಿವೆ. ವಿವಿಧ ಚಟಗಳ ದಾಸರಾಗಿ ಮಾನವೀಯ ಮೌಲ್ಯಗಳನ್ನೇ ಗಾಳಿಗೆ ತೂರಿದ್ದೇವೆ.

ಇದಕ್ಕೆ ಸಾಕ್ಷಿಯೆಂಬಂತೆ ಅಂದಿನ ಧರ್ಮ ಗ್ರಂಥಗಳಲ್ಲಿ, ಶಾಸನಗಳಲ್ಲಿ ಕೆಲವು ಉಲ್ಲೇಖ ಸಿಗುತ್ತವೆ. ಮಾನವ ನಿರ್ಮಿತವಾದ ಈಗಿನ ಸಮಾಜದಲ್ಲಿ; ವಿಪುಲ ಪ್ರಮಾಣದಲ್ಲಿ ಬದಲಾವಣೆಯನ್ನು ಕಾಣುತ್ತಿದ್ದೇವೆ. ಪರಿವರ್ತನೆ ಪ್ರಕೃತಿಯ ನಿಯಮ ವೇನೋ ನಿಜ. ಇಂದು ಎಲ್ಲರಲ್ಲಿ ಆತ್ಮಸ್ಥೈರ್ಯದ, ಅಭಿಮಾನದ ಕೊರತೆ ಎದ್ದು ಕಾಣುತ್ತಿದೆ. ನೆರೆಮನೆಗೆ ಬೆಂಕಿ ಬಿದ್ದರೆ ನಮಗೇನು ಬಂದಿಲ್ಲವಲ್ಲಾ ! ಎಂದು ಮೂಕ ಪ್ರೇಕ್ಷಕ ರಾಗಿದ್ದೇವೆ. ಅಭಿಮಾನ ಶೂನ್ಯರಾಗಿದ್ದೇವೆ. ರವೀಂದ್ರನಾಥ ಟಾಗೋರ್‌ರು ಹೇಳುವಂತೆ-'ಮನುಷ್ಯನೆ! ದುಷ್ಟ ದಬ್ಬಾಳಿಕೆಗೆ ಹೆದರಿ ಗುಲಾಮಗಿರಿಗೆ ಬಲಿಯಾಗಬೇಡ' ಬದುಕು ಹೇಯವೆಂದು ಜೀವ ಕಳೆದುಕೊಳ್ಳಬೇಡ. ಅಭಿಮಾನದಿಂದ ಎದುರಿಸು ಎಂದು ಹೇಳಿದ ಈ ದಿವ್ಯಮಂತ್ರವನ್ನು ನಾವು ಅನುಸರಿಸುತ್ತಿದ್ದೇವೆಯೇ? ನಮ್ಮವರು ಮರ್ತ್ಯವನ್ನು ಹೇಯವೆಂದು ಹೇಳಿ, ಹೇಡಿಯಾಗಿ ಓಡಿ ಹೋದವರಲ್ಲ, ಬರುವ ಬವಣೆಗಳ ಪ್ರವಾಹದ ವಿರುದ್ಧವೇ ಎದೆಯುಬ್ಬಿಸಿ ಮುನ್ನಡೆದವರು. ಅಂಥ ಗುಣ ನಮ್ಮಲ್ಲಿಂದು ಕೊರತೆಯಾಗಿದೆ. ಇತ್ತೀಚಿನ ಯುವ ಪೀಳಿಗೆಯಲ್ಲಿ ದುಶ್ಚಟಗಳ ತುಂಟಾಟ ಅತಿಯಾಗುತ್ತಿದೆ. ನಮ್ಮ ಜೀವನದ ಹಾದಿಯನ್ನು ತುಳಿಯುವ ಗೊತ್ತು ಗುರಿಯಿಲ್ಲದವರಾಗಿದ್ದಾರೆ. ಅವರಲ್ಲಿ ಅತಿಯಾದ ಆನಂದ, ಅತಿಯಾದ ದುಃಖ ತಡೆದುಕೊಳ್ಳುವ ಶಕ್ತಿಯೂ ಇಲ್ಲದಂತಾಗಿದೆ.

ಇಂದಿನ ಯುವಕ-ಯುವತಿಯರು ಹೇಗಿದ್ದಾರೆಂಬುದು ತಮಗೂ ಹೊತ್ತು. ಹೆಚ್ಚು-ಹೆಚ್ಚಾಗಿ(ವಿದೇಶಿ) (ಪಾಶ್ಚಾತ್ಯ ಸಂಸ್ಕೃತಿಗಳಿಗೆ ಸ್ವೀಕರಿಸುತ್ತಲಿದ್ದಾರೆ.) ಮನೆ ಬಿಟ್ಟರೆ ಸಾಕು ಶಾಲೆ-ಕಾಲೇಜಿನ ನೆಪದಲ್ಲಿ ಕ್ಲಬ್ಬು, ಪಬ್ಬು, ಸುರಾಲಯ, ಕ್ಯಾಬರೇ ನಿಲಯಗಳಲ್ಲಿ ಕಾಲ ಹರಣ ಮಾಡುವ ಪ್ರವೃತ್ತಿ ಹೆಚ್ಚಾಗಿದೆ. ಟಿ.ವಿ. ಕಾರ್ಯಕ್ರಮಗಳ ತುಂಬೆಲ್ಲ

* ಎಸ್.ವ್ಹಿ.ಇ.ಎಸ್. ಸ್ನಾತಕೋತ್ತರ ಕೇಂದ್ರ, ಹಾರೋಗೇರಿ, ರಾಯಭಾಗ ತಾ||, ಬೆಳಗಾವಿ ಜಿಲ್ಲೆ-೫೯೧ ೨೨೦.





ಕಾಣಿಸುವವರು ಇವರೇ ಬೇರೇ ಯಾರೂ ಅಲ್ಲ. ಅಂಥ ಬೇಜವಾಬ್ದಾರಿಯ ವರ್ತನೆಯನ್ನು ಕಂಡೂ ಪಾಲಕರು ಕಣ್ಮುಚ್ಚಿಕೊಂಡು ಕುಳಿತಿರುವುದು ಅದೆಷ್ಟು ಸರಿ ? ದೇಶಕ್ಕೆ ಇವರಿಂದ ಯಾವ ಲಾಭವಾದೀತು? ಎಂಬುದನ್ನು ಚಿಂತನೆ ಮಾಡಬೇಕಾಗಿದೆಯಲ್ಲವೆ ?

ಸಾಮಾನ್ಯವಾಗಿ ನಾವೀಗ ಆಚರಿಸುತ್ತಿರುವ ಜೀವನದ ಕೆಲವು ಪ್ರಮುಖ ಘಟನೆಗಳನ್ನು ನೆನಪಿಸಿಕೊಂಡರೆ ನಮ್ಮ ಧರ್ಮ ಸಂಸ್ಕೃತಿಗಳ ಪಥ ಎತ್ತ ಸಾಗುತ್ತಿದೆಯೆಂಬುದರ ಅರಿವು ನಮಗಾಗಬಹುದು. ಪ್ರತಿಯೊಬ್ಬನಿಗೂ ನೀರು, ವಾಯು, ಆಹಾರ, ವಸ್ತ್ರ ವಸತಿ ಇವು ಅತ್ಯಗತ್ಯವಾದವುಗಳೇನೋ ನಿಜ; ಆದರೆ ಈ ಸಂಪನ್ಮೂಲಗಳನ್ನು ಮಿತಿ ಮೀರಿ ಬಳಕೆ ಮಾಡುತ್ತ ಹಾನಿಯನ್ನುಂಟು ಮಾಡುವ ಪಥವನ್ನು ಹಿಡಿದು ಕ್ರಮಿಸುವ ಜನರೇ ಹೆಚ್ಚು. ಬಸವಣ್ಣನವರು ಇಂದಿಂಗೆ ನಾಳಿಂಗೆ ಎಂದೆನ್ನದೇ ಜೀವನ ಸಾಗಿಸಬೇಕೆಂಬುದಾಗಿ ತಮ್ಮ ವಚನಗಳ ಮುಖಾಂತರ ಸಾರಿ ಸಾರಿ ಹೇಳಿದ್ದರೂ ನಾವು ಅವನ್ನು ಅರ್ಥೈಸಿಕೊಳ್ಳುತ್ತಿಲ್ಲ. ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡು ಪೇಚಾಡುತ್ತಲಿದ್ದೇವೆ.

ಕಳೆದೈದು ದಶಕಗಳ ಹಿಂದೆ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಮತ್ತಿತರ ರಾಷ್ಟ್ರ ನಾಯಕರು ಸರಳ, ಸಾದಾ ಜೀವನದೊಂದಿಗೆ ಭವ್ಯ ಭಾರತವನ್ನು ಮುಕ್ತಗೊಳಿಸಲು ಬ್ರಿಟಿಷರ ವಿರುದ್ಧ ಹೋರಾಡಿ ಸ್ವಾತಂತ್ರ್ಯ ಗಳಿಸಿಕೊಟ್ಟರು. ಇದು ನಮಗೆಲ್ಲ ಗೊತ್ತಿದ್ದರೂ ಅವರ ಜೀವನದ ತಿರುಳು, ತತ್ತ್ವಗಳ ಅರಿವು ಮತ್ತು ಅವರ ಸಂದೇಶಗಳನ್ನರಿಯದೇ, ಅಂಥವರ ಆದರ್ಶ ಬದುಕಿನ ಸೂತ್ರಗಳನ್ನು-ವಿಚಾರಗಳನ್ನು ಅಲ್ಲಗಳೆದು ಪಾಶ್ಚಾತ್ಯರ ಸಂಸ್ಕೃತಿಯನ್ನೇ ಅನುಕರಿಸಿ ಮುಂದುವರೆದಿದ್ದೇವೆ. 'ಖಾದಿಯೆಂದರೆ ಸ್ವರ್ಗದ ಹಾದಿ' ಯೆಂದು ಬಗೆದ ಗಾಂಧೀಜಿಯವರ ತತ್ತ್ವವನ್ನು ಇಂದಿನ ರಾಜಕಾರಣಿಗಳು ಖಾದಿ ತೊಟ್ಟರೂ ಅದರ ಮೂಲ ಆಶಯದಂತೆ ನಡೆಯುತ್ತಿಲ್ಲವೆಂಬುದು ಸೂರ್ಯನಷ್ಟೇ ಸತ್ಯ.

ಇಂದಿನ ಆಧುನಿಕ ಯುಗದಲ್ಲಿ ಹೆಚ್ಚಾಗಿ ಬೆಳೆಯುತ್ತಲಿರುವ ಮಕ್ಕಳ ಭವಿಷ್ಯಕ್ಕೆ ಪಾಲಕರೇ ಹೊಣೆಗಾರರೆಂಬ ಮಾತು ಸುಳ್ಳಲ್ಲ. ಮಕ್ಕಳ ಭವಿಷ್ಯವೂ ಇವರ ಕೈಯಲ್ಲಿದೆ. ಉತ್ತಮ ಸಂಸ್ಕೃತಿಯ ನಿರ್ವಹಣೆಯು ಇವರಿಂದಲೇ ಆಗಬೇಕು. ಮನೆಗೆ ಮಕ್ಕಳು ಹೇಗೆ ಅಂದವೋ ಹಾಗೆಯೇ ಅಂಥ ಮನೆಗೊಂದು ಗ್ರಂಥಾಲಯವಿದ್ದರೆ ಮತ್ತಷ್ಟು ಶೋಭೆ ತರುತ್ತದೆ. ಒಳ್ಳೆಯ ಪುಸ್ತಕಗಳನ್ನೊಳಗೊಂಡ ಗ್ರಂಥಾಲಯವಿದ್ದಲ್ಲಿ ಮಕ್ಕಳ ಮನಸ್ಸಿನ ಮೇಲೆ ಒಳ್ಳೆಯ ಸಂಸ್ಕಾರದ ಪರಿಣಾಮ ಬೀರಬಲ್ಲದು. ಅಂತೆಯೇ ಸಿಸಿರೋ ಎಂಬ ತತ್ತ್ವಜ್ಞಾನಿ ಹೀಗೆ ಹೇಳಿದ್ದಾನೆ. ' A room without books is a body without soul' ಅಂದರೆ 'ಪುಸ್ತಕವಿಲ್ಲದ ಕೋಣೆ ಆತ್ಮವಿಲ್ಲದ ದೇಹ ವಿದ್ದಂತೆ' ಇದರಿಂದ ಒಳ್ಳೆಯ ಸಂಸ್ಕೃತಿ ನಿರ್ಮಾಣವಾಗಲು ಸಾಧ್ಯವಾಗುತ್ತದೆ. ಒಳ್ಳೆಯ ಸಂಸ್ಕೃತಿಯ ಪರಿಸರದಿಂದ ಮಾನವನು ಒಳ್ಳೆಯ ಸಮಾಜ ಕಟ್ಟಲು ಪೂರಕವಾಗುತ್ತದೆ. 'A man without culture like an animal' ಎಂಬ ಆಂಗ್ಲಗಾದೆ ಇದನ್ನೇ ಹೇಳುತ್ತದೆ.

ಇಂದಿನ ಮಕ್ಕಳಲ್ಲಿ ಓದಿನ ಕಡೆಗೆ ಗಮನ ಕಡಿಮೆಯಾಗುತ್ತಿದ್ದು ಟಿ.ವಿ.ಯ ದಾಸರಾಗಿದ್ದಾರೆ. ಭವಿಷತ್ತಿನ ಬಗೆಗೆ ಚಿಂತೆಯಿಲ್ಲ. ಕಾಳಜಿಯಿಲ್ಲ, ಇಂದಿನ ಯುವಕರಲ್ಲಿ ಚಿಂತನಶೀಲದ ಕೊರತೆ ಎದ್ದು ಕಾಣುತ್ತದೆ. ದೇಶದ ಬಗ್ಗೆ ಗೌರವ, ಅಭಿಮಾನ ವಿಲ್ಲದಂತಾಗಿದೆ. ದೇಶದ ಬಗೆಗಿನ ಚಿಂತನ ಮಂಥನವಾಗಬೇಕು. ಹೊಸ ಹೊಸ ಪ್ರಯೋಗ ದೊಂದಿಗೆ ಉತ್ತಮವಾದ ಗುಣಮಟ್ಟದಿಂದ ಕೂಡಿದ ಶಿಕ್ಷಣದ ಪ್ರಸಾರವಾಗಬೇಕು. ಇಂದು ಅಗತ್ಯವೂ ಆಗಿದೆ. ಯಾಕೆಂದರೆ ರಾಷ್ಟ್ರದ ಭವಿತವ್ಯ ಬರುತ್ತಿರುವ ಇಂದಿನ ಯುವಕರ ಮೇಲೆ ಅವಲಂಬಿತವಾಗಿದೆ.

'Youth peoples are the wealth of the nation' ಎಂಬಂತೆ ಒಳ್ಳೆಯದರ ಕಡೆಗೆ ಬೆನ್ನು ಹತ್ತಿದ ಯುವಕರ ಪಡೆಯಿಂದು ಬೇಕಾಗಿದೆ. ಭವ್ಯ ಭಾರತದ ನಿರ್ಮಾಣಕ್ಕೆ ಯುವಕರು ಆಸಕ್ತಿ ವಹಿಸಬೇಕಾಗಿದೆ. ದೇಶದ ಮೇಲೆ ಎರಗುತ್ತಿರುವ ದುಷ್ಟಶಕ್ತಿಗಳ ಅಟ್ಟಹಾಸವನ್ನು ಮಟ್ಟ ಹಾಕಲು ಇದರಿಂದ ಅನುಕೂಲವಾಗುತ್ತದೆ. ದೇಶವಿಂದು ಅಪಾಯದ ಅಂಚಿನಲ್ಲಿದೆ. ಭಯೋತ್ಪಾದನೆಯಂತಹ ಕೃತ್ಯಗಳು ಮಾನವನ ನೆಮ್ಮದಿಯನ್ನೇ ಕಿತ್ತು ಹಾಕಿದೆ. ಆದರೆ ನಾವಿಂದು ಇದರಿಂದ ಮುಕ್ತವಾಗಬೇಕಾದರೆ ಹೊಸದೊಂದು ಸಂಕಲ್ಪ ಶ್ರದ್ಧೆ, ಸ್ವಾಭಿಮಾನ-ಅಭಿಮಾನಗಳನ್ನು ಮೈಗೂಡಿಸಿಕೊಳ್ಳಬೇಕಾಗಿದೆ. ಬದಲಾಗುವ ಪ್ರಕೃತಿ ಯೊಂದಿಗೆ ಗಾಂಧೀಜಿ ಯವರು ಕಂಡ ಕನಸಿನ ಭಾರತವನ್ನು ನನಸು ಮಾಡುವಲ್ಲಿ ನಮ್ಮೆಲ್ಲರ ಮನಸ್ಸುಗಳ ಸನ್ನದ್ಧ ವಾಗಬೇಕು. ಅಂತಹ ಚಿಂತನೆಗಳತ್ತ ನಾವೆಲ್ಲ ಹೆಜ್ಜೆ ಹಾಕಿದರೆ ಮತ್ತೆ ಭಾರತಕ್ಕೆ ಭವಿಷ್ಯವಿದೆ. ಅಂಥ ಸಾಹಸವನ್ನು ನಾವೆಲ್ಲರೂ ಒಂದಾಗಿ ಮುಂದೆ ಸಾಗಬೇಕು.

*

## ಜೀವನದ ಗುರಿ

–ಡಾ॥ ಸರ್ವಪಲ್ಲಿ ರಾಧಾಕೃಷ್ಣನ್

ಜೀವನವನ್ನು ಇದ್ದಕ್ಕಿದ್ದಂತೆ ಒಪ್ಪಬೇಕೆನ್ನುವುದು ಮಾನವ ಸ್ವಭಾವಕ್ಕೆ ಒಗ್ಗದ ವಿಷಯ. ಮನುಷ್ಯನಿಗೆ ಅದರಿಂದ ತೃಪ್ತಿಯಿಲ್ಲ. ಆತನ ಎದೆಯಲ್ಲಿ ಹುದುಗಿಸಿ ಕೊಂಡಿರುವ ಒಂದು ಶಕ್ತಿಯು ಆತನನ್ನು ಮುಂದೆ ಸಾಗುವಂತೆ ನಿರಂತರವೂ ಪ್ರೇರೇಪಿಸುತ್ತಿರುತ್ತದೆ.

ಇರುವ ರೀತಿಯಲ್ಲಿಯೇ ಜಗತ್ತನ್ನು ಕಾಯ್ದಿರಿಸುವುದು ಜೀವನದ ಅಂತಿಮ ಗುರಿಯಿಲ್ಲ. ಜಗತ್ತು ಮೇಲಕ್ಕೆ ಬರ ಬೇಕಾಗಿದೆ. ಯೋಗ್ಯ ರೀತಿಯಲ್ಲಿ ಬದುಕು ವ್ಯಕ್ತಿತ್ವದ ಪರಿಪೂರ್ಣತೆಯನ್ನು ಸಾಧಿಸಬೇಕೆಂದು ಪ್ರತಿಯೊಬ್ಬ ಮನುಷ್ಯನೂ ಬಯಸುತ್ತಾನೆ. ಜೀವನವನ್ನು ಇರುವಂತೆ ಒಪ್ಪಿ ಹೆಚ್ಚಿನ ಸಾಹಸಕ್ಕೆ ತೊಡಗುವುದೇ 'ನೈತಿಕಪ್ರಗತಿ' ಯಾಗಿದೆ.

ಹಿಂದಿನ ಜೀವನದ ಬಗೆಗಳನ್ನು ಈಗ ಪುನರುಚ್ಚರಿಸುತ್ತ ಕೊಡಬೇಕಾದುದಿಲ್ಲ. ಹಾಗೆ ಶಕ್ಯವಾಗಬಹುದಾದರೂ ಅದು ಉಚಿತವೆನಿಸಲಾರದು. ರಜಪೂತ ಯೋಧನ ಇಲ್ಲವೆ ಮಧ್ಯ ಯುಗದ ಸರದಾರನ ರೀತಿ ನೀತಿಗಳು ಆಧುನಿಕ ಕಾಲಕ್ಕೆ ಹೊಂದಿಕೆಯಾಗಲಾರವು. ಬದಲಾಗದಂಥ ಪರಿಸ್ಥಿತಿ ಸುತ್ತಮುತ್ತಲೂ ಇದೆಯೆಂದರೂ ಕೂಡ ನಮ್ಮ ಸಮಸ್ಯೆ ಅಲ್ಲಿಗೇ ಮುಗಿಯಲಿಲ್ಲ. ಯಾಕೆಂದರೆ ನಮ್ಮ ಆದರ್ಶಗಳು ಸದಾವಕಾಲವೂ ಬದಲಾವಣೆ ಹೊಂದುತ್ತಲೇ ಇರುತ್ತವೆ. ಆದುದರಿಂದ ಜೀವನಕ್ಕೆ ನಾವು ಹೊಂದಿಕೊಳ್ಳುವುದಲ್ಲದೆ ನಮ್ಮ ಆದರ್ಶಗಳಿಗೆ ತಕ್ಕಂತೆ ಜೀವನವನ್ನು ಮಾರ್ಪಡಿ ಸುವುದೇ ನೈತಿಕ ಜೀವನದ ತಿರುಳಾಗಿದೆ.

ಇರುವ ರೀತಿಯಲ್ಲಿಯೇ ಜೀವನವನ್ನು ಒಪ್ಪುವುದು ಒಂದು ದೃಷ್ಟಿಯಿಂದ ಪರಿಪೂರ್ಣವಾಗಿ ತೋರಬಹುದು. ಆದರೆ ಅದು ಮಾನವ ಪರಿಪೂರ್ಣತೆಯಲ್ಲ. ಜೀವನಕ್ಕೆ ಹೊಂದಿಕೊಳ್ಳುವುದರಲ್ಲಿಯೂ ಒಂದು ಬಗೆಯ ಸೊಗಸು ಇದೆ. ಆದರೆ ಆ ಹೊಂದಿಕೆಯು ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ಈ ವೈವಿಧ್ಯಮಯ ಜಗತ್ತಿನಲ್ಲಿ ಬಹುಕಾಲ ಬಾಳಲಾರದು.

ಜೀವನದ ಹಾದಿಯಲ್ಲಿ ವಿಶ್ರಾಂತಿ ಸ್ಥಳವೊಂದೂ ಇಲ್ಲ. ಒಂದೊಂದು ಸಾಧನೆಯೂ ಹೊಸ ಸಾಹಸಕ್ಕೆ ಪ್ರಚೋದನೆ ಕೊಡುವುದೇ ಆಗಿದೆ. ನೆಲಕ್ಕೆ ಹೊಂದಿಕೊಂಡ ಕಲ್ಲು ಮಣ್ಣಿನಂತೆ, ಜೀವನಕ್ಕೆ ಹೊಂದಿಕೊಳ್ಳುವುದಿಲ್ಲ. ಏರಬೇಕಾಗಿರುವ ಒಂದು ಎತ್ತರಕ್ಕೆ ಜಗತ್ತನ್ನು ಎತ್ತರಿಸು ವವರೆಗೆ ಸಾಹಸ ಪಡುವುದೇ ಜೀವನದ ಚರಮ ಗುರಿ.

### ಧರ್ಮಶಿಕ್ಷಣ

ರಾಜ್ಯ ಮತಧರ್ಮದಲ್ಲಿ ಆಸಕ್ತಿ ವಹಿಸಬಲ್ಲುದೆಂದಾಗಲಿ ಅದರ ಶಿಕ್ಷಣವನ್ನು ಕೈಕೊಳ್ಳಬಲ್ಲುದೆಂದಾಗಲಿ ನಾನು ನಂಬುವುದಿಲ್ಲ. ಮತೀಯ ಶಿಕ್ಷಣವು ಮುಖ್ಯವಾಗಿ ಧರ್ಮ–ಸಂಸ್ಥೆಗಳಿಗೆ ಸಂಬಂಧಪಟ್ಟಿರಬೇಕು. ಮತಧರ್ಮವನ್ನೂ ನೀತಿಯನ್ನೂ ಬೆರೆಸಬಾರದು. ಮೂಲಭೂತವಾದ ನೀತಿಯು ಎಲ್ಲ ಮತ ಧರ್ಮಗಳುಗೂ ಸಾಮಾನ್ಯವಾದುದೆಂದು ನಾನು ನಂಬಿದ್ದೇನೆ. ಮೂಲಭೂತವಾದ ನೀತಿಯನ್ನು ಕಲಿಸುವುದು ನಿಸ್ಸಂಶಯವಾಗಿ ರಾಜ್ಯದ ಕಾರ್ಯ, ಧರ್ಮ ಎಂದು ಹೇಳುವಾಗ ಇಲ್ಲಿಮೂಲಭೂತವಾದ ನೀತಿ ಎಂದು ನನ್ನ ಭಾವವಲ್ಲ; ಮತ ಎಂಬ ಹೆಸರಿನಲ್ಲಿ ಸೇರಿರುವುದು ಎಂಬರ್ಥ. ರಾಜ್ಯ ಸಹಾಯವುಳ್ಳ ಧರ್ಮಗಳ ಅಥವಾ ರಾಜಮತಗಳ ತೊಂದರೆಯನ್ನು ನಾವು ಸಾಕಾದಷ್ಟು ಅನುಭವಿಸಿದ್ದೇವೆ. ಒಂದು ಸಂಘ ಅಥವಾ ಗುಂಪು ತನ್ನ ಧರ್ಮದ ಅಸ್ತಿತ್ವಕ್ಕಾಗಿ ಸ್ವಲ್ಪವಾಗಿಯೋ ಪೂರ್ಣವಾಗಿಯೋ ರಾಜಾಶ್ರಯವನ್ನು ಹೊಂದಿದರೆ ಅದಕ್ಕೆ ಧರ್ಮವೆಂಬ ಹೆಸರು ಉಚಿತವಲ್ಲ ಅಥವಾ ಧರ್ಮದ ಹೆಸರಿಗೆ ತಕ್ಕ ಬೆಲೆ ಅದಕ್ಕಿಲ್ಲ. ಈ ಸತ್ಯ ನನಗೆ ಸ್ಪಷ್ಟವಾಗಿದೆ. ಇದನ್ನು ದೃಢಗೊಳಿಸುವ ದೃಷ್ಟಾಂಗಗಳನ್ನು ಕೊಡುವ ಅವಶ್ಯಕತೆಯಿಲ್ಲ.

–ಮಹಾತ್ಮ ಗಾಂಧೀಜಿ





## ಬಸವಣ್ಣನವರ ದೃಷ್ಟಿಯಲ್ಲಿ ಬೇಡ–ಬೇಕುಗಳು *

–ಪ್ರೊ. ಆರ್. ರಾಚಪ್ಪ

ಹನ್ನೆರಡನೆಯ ಶತಮಾನದಲ್ಲಿ ಮಾನವನಾಗಿ ಹುಟ್ಟಿ ಮಹಾನುಭಾವತ್ವವನ್ನು ಪಡೆದ ಕ್ರಾಂತಿವಾದಿ, ಸಮಾಜ ಸುಧಾರಕ, ಮಹಾದಾರ್ಶನಿಕ, ಹುತಾತ್ಮರೆನಿಸಿದ ಬಸವಣ್ಣ ನವರು ಮನುಷ್ಯನಾಗಿ ಬದುಕುವುದು ಹೇಗೆಂದು ಸ್ಪಷ್ಟ ಪಡಿಸಿದ್ದಾನೆ. ತಮ್ಮ ಕಾಲಕ್ಕೆ ಸಮಾಜದಲ್ಲಿ ತುಂಬಿದ್ದ ಜಾತಿ ವಾದ, ಮೇಲು–ಕೀಳು ಎಂಬ ತಾರತಮ್ಯಗಳನ್ನು ಕಂಡು ರೋಸಿಹೋಗಿ ಅವುಗಳ ವಿರುದ್ಧ ಸಿಡಿದೆದ್ದರು. ತಮ್ಮ ಸುತ್ತಮುತ್ತಲಿನ ಆಚರಣೆ, ಸಂಪ್ರದಾಯಗಳು, ಕುರುಡು ನಂಬಿಕೆಗಳನ್ನು ಖಂಡಿಸುತ್ತಾ ಮೇಲು–ಕೀಳುಗಳು, ಜಾತಿ ಗಳು, ಮನುಷ್ಯ ನಿರ್ಮಿತವೇ ಹೊರತು ಅನ್ಯಥಾ ಅಲ್ಲ. ದೇವರ ಹೆಸರಿನಲ್ಲಿ ನಡೆಯುವ ಶೋಷಣೆ ಎಂದು ಸಾರಿ ದರು. ಹೆಣ್ಣು ಗಂಡುಗಳಿಗೆ ಇದ್ದ ನಿರ್ಬಂಧಗಳು, ಸೌಲಭ್ಯ ಗಳು ಅರ್ಥವಿಲ್ಲದವು ಎಂದು ಮನಗಂಡು ಪುರುಷ ಪ್ರಧಾನ ಸಮಾಜ ಸ್ತ್ರೀಯರ ಬಗೆಗೆ ತಳೆದಿದ್ದ ನಿಲವನ್ನು ಖಂಡಿಸಿ ದರು. ಪುರುಷನಂತೆ ಸ್ತ್ರೀಯು ದೀಕ್ಷಾಯೋಗ್ಯಳು. ಆಕೆಗೆ ಸಮಾನ ಹಕ್ಕು ಸಮಾಜದಲ್ಲಿರಬೇಕೆಂದು ವಾದಿಸಿದರು.

ಹೀಗೆ ಜಾತಿ–ಮತಗಳ ಬೇಧ, ಮೇಲು–ಕೀಳು ಎಂಬ ತಾರತಮ್ಯ ವರ್ತನೆಗಳನ್ನು ಖಂಡಿಸುತ್ತ ಮನುಷ್ಯರೆಲ್ಲಾ ಒಂದೇ ಎಂಬ ತತ್ತ್ವವನ್ನು ಸಾರಿದರು. ಕೀಳು ವರ್ಗದವರ ಬಳಿ ಹೋಗಿ ಅವರನ್ನು ತಿದ್ದಿ ಅವರಲ್ಲಿ ನವ ಚೈತನ್ಯ ಮೂಡಲು ಕಾರಣರಾದರು. ಜನಭಾಷೆಯಲ್ಲಿ ವಿಚಾರವನ್ನು ಹೇಳುತ್ತಾ ಹೊರಟ ಬಸವಣ್ಣನವರು ಸಾಹಿತ್ಯಕ್ಕೆ ಹೊಸ ತಿರುವನ್ನು ನೀಡಿದರು. ಪಂಡಿತಮಾನ್ಯವಾಗಿದ್ದ ಸಾಹಿತ್ಯ ಶ್ರೀಸಾಮಾನ್ಯರಿಗೆ ವೇದ್ಯವಾಗುವಂತೆ ಮಾಡಿದ ಕೀರ್ತಿ ಬಸವಾದಿ ವಚನಕಾರರದ್ದು. **'ವಚನ'** ಎಂಬ ವಿಶಿಷ್ಟ ಪ್ರಕಾರದ ಹೆಸರಿನಲ್ಲಿ ಜೀವನವನ್ನು ಬಿಂಬಿಸುವ ಮಹತ್ಸಾ ಧನೆಯನ್ನು ಮಾಡಿದರು.

ಜೀವನ ಎಂದರೇನು? ಜೀವನದಲ್ಲಿ ಬದುಕುವ ಕ್ರಮ ಎಂತಹುದಿರಬೇಕು? ಯಾವ ತೆರನ ಬದುಕನ್ನು ಅನುಸರಿಸ ಬಾರದು? ಇತ್ಯಾದಿ ಅಂಶಗಳಲ್ಲದೆ ಸಮಾಜ, ಸಮಾಜ ದಲ್ಲಿನ ಆಗು ಹೋಗುಗಳು, ಅಲ್ಲಿನ ನ್ಯೂನತೆಗಳು, ಅವುಗಳನ್ನು ಸರಿಪಡಿಸುವ ವಿಧಾನ ಇತ್ಯಾದಿಗಳನ್ನು ವಿವರಿಸುತ್ತಾ ಹೋರಾಟದ ಬದುಕನ್ನು ನಡೆಸಿದ ಬಸವಣ್ಣ ನವರು ಸೂತ್ರ ರೂಪದಲ್ಲಿ ಮನುಷ್ಯ ಹೇಗೆ ಬದುಕ ಬೇಕು? ಬದುಕಿನಲ್ಲಿ ಯಾವುದನ್ನು ಮಾಡಬಾರದು ಎಂಬಂಶಗಳನ್ನು ಸರಳವಾಗಿ ನಿರೂಪಿಸಿದ್ದಾರೆ. ಸಾಮಾಜಿಕ ಅನ್ಯಾಯಗಳ ಬಗ್ಗೆ ಸಿಡಿದೆದ್ದ ಅವರು ತಮ್ಮ ಸುತ್ತಮುತ್ತಣ ಜನ ಬದುಕುತ್ತಿದ್ದ ಮಾರ್ಗವನ್ನು ಕಂಡು ಹೇಸಿ, ಇದಲ್ಲ ಹೀಗೆ ಬದುಕಿ ಎಂದು ನಯವಾಗಿ ಹೇಳಿದರು, ಕೇಳ ದಿದ್ದಾಗ ಕೆರಳಿ ಹೇಳಿದರು, ಚಾಟಿ ಏಟಿನಂತೆ ಚುರುಕಾಗಿ ಹೇಳಿದರು.

ಅವರ ವಚನಗಳಲ್ಲಿ ಒಂದು ಯಾವುದು ಬೇಕು ಎಂದು ಸೂಚಿಸಿದರೆ, ಇನ್ನೊಂದು ವಚನ ಯಾವುದು ಬೇಡ ಎಂಬುದನ್ನು ಸೂಚಿಸುತ್ತದೆ. ಈಗ ಆ ವಚನಗಳನ್ನು ವಿಶ್ಲೇಷಿಸಿ ನೋಡೋಣ.

***ಕಳಬೇಡ, ಕೊಲಬೇಡ***  
***ಹುಸಿಯ ನುಡಿಯಲು ಬೇಡ***  
***ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ***  
***ತನ್ನ ಬಣ್ಣಿಸಬೇಡ, ಇದಿರಹಳಿಯಲುಬೇಡ***  
***ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ***  
***ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವಪರಿ***

ತಾತ್ವಿಕವಾಗಿ ವಿಚಾರ ಮಾಡಿದಾಗ ಪರಮಾತ್ಮನ ಒಂದು ಅಂಶವಾದ ಈ ಮಾನವ ಮತ್ತೆ ಆ ಪರಮಾತ್ಮ ನಲ್ಲಿ ಐಕ್ಯತೆಯನ್ನು ಸಾಧಿಸಬೇಕೆಂಬ ವಿಚಾರ ವೀರಶೈವ ತತ್ತ್ವದ ಮುಖ್ಯಸಾರ. ಇದನ್ನು ಗಳಿಸುವ ಪರಮ ಗುರಿಯನ್ನು ಹೊಂದಿ ಆ ಕಡೆಗೆ ದೃಷ್ಟಿಯನ್ನು ಕೇಂದ್ರೀ ಕರಿಸಿ ಐಕ್ಯತೆಯನ್ನು ಸಾಧಿಸುವ ಮಹಾಗುರಿಯನ್ನು

* 'ರಜತಗಿರಿ', ೧೮೫೯, ೭ನೇ 'ಬಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–೫೬೦ ೦೧೦.

ಮಾನವ ಹೊಂದಬೇಕು. ಆ ಪರಮಾತ್ಮ ಒಲಿದರೆ ಮಾತ್ರ ಇದು ಸಾಧ್ಯ. ನಾವು ಎಷ್ಟೇ ಸಾಧನೆ ಮಾಡಿದರೂ ಆ ಪರಮಾತ್ಮನು ಒಲಿಯದೆ ಫಲವಿಲ್ಲ. ಆತನನ್ನು ಒಲಿಸಿಕೊಳ್ಳಬೇಕಾದ್ದು ಅಗತ್ಯ. ಆತನೊಲುಮೆ ಗಳಿಸಲು ಇರುವ ಮಾರ್ಗ ಶುದ್ಧ ಜೀವನ ನಡೆಸುವುದು. ಅಂತರಂಗ–ಬಹಿರಂಗಗಳೆರಡೂ ಶುದ್ಧ ವಾಗಿರಬೇಕು. ತೋರಿಕೆಯ ಭಕ್ತಿಯಿಂದ ಪರಮಾತ್ಮನು ಒಲಿಯುವುದಿಲ್ಲ. ಅದು ಕುಂಬಳಕಾಯಿಗೆ ಕಬ್ಬಿಣದ ಕಟ್ಟು ಕೊಟ್ಟಂತೆ. ಅದು ಕೊಳೆಯುವುದಲ್ಲದೆ ಬಲು ಹಾಗದು. ಮನ ಶುದ್ಧವಿಲ್ಲದ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ. ಆದುದರಿಂದ ಅಂತರಂಗ ಬಹಿರಂಗಗಳೆರಡೂ ಶುದ್ಧವಾಗಿರಬೇಕೆಂದು ಬಸವಣ್ಣನವರು ತಿಳಿಸಿ ಆ ಪರಮಾತ್ಮನನ್ನು ಒಲಿಸಲು ಇರುವ ಮಾರ್ಗ ಇದೊಂದೇ ಎಂದು ಹೇಳಿದ್ದಾರೆ.

ಈ ಅಂತರಂಗ–ಬಹಿರಂಗ ಶುದ್ಧವಾಗುವುದು ಹೇಗೆ ಎಂಬುದಕ್ಕೆ 'ಕಳಬೇಡ–ಕೊಲಬೇಡ' ಇತ್ಯಾದಿ ಬೇಡಗಳನ್ನು ಹೇಳಿದ್ದಾರೆ. ನಾವು ಬದುಕಬೇಕು ಇನ್ನೊಬ್ಬರ ಹಂಗಿನಲ್ಲಲ್ಲ. ನಾವು ಬದುಕಬೇಕು, ಇನ್ನೊಬ್ಬರ ಸ್ವತ್ತನ್ನು ಅಪಹರಿಸಿಯಲ್ಲ, ನಾವು ಬದುಕಬೇಕು, ಜೀವನವನ್ನು ಕಸಿದುಕೊಂಡಲ್ಲ. ನಾವು ಬದುಕಬೇಕು, ಇನ್ನೊಬ್ಬರಿಗೆ ಮುನಿದಲ್ಲ. ನಾವು ಬದುಕಬೇಕು, ಇನ್ನೊಬ್ಬರಿಗೆ ಅಸಹ್ಯಪಟ್ಟು ಅಲ್ಲ. ಆದುದರಿಂದ ಇನ್ನೊಬ್ಬರ ವಸ್ತುವಿಗೆ ಆಸೆಪಡದೆ ಇನ್ನೊಬ್ಬರ ಜೀವಕ್ಕೆ ಮುಳುವಾಗಿ ಬದುಕುವ ಬದುಕು ಶುದ್ಧ ಅಲ್ಲ, ಕಳ್ಳತನ ಮಾಡುವುದು, ಕೊಲೆ ಮಾಡುವುದು, ಸುಳ್ಳುಹೇಳುವುದು; ಇನ್ನೊಬ್ಬರನ್ನು ಹಳಿಯುವುದು, ಇನ್ನೊಬ್ಬರಿಗೆ ಮುನಿಯುವುದು, ತಾನುಂಟೋ, ಮೂರು ಲೋಕ ಉಂಟೋ ಎಂದು ಮೆರೆಯುವುದು ಇತ್ಯಾದಿಗಳು, ಅಂತರಂಗದಲ್ಲಾಗಲಿ, ಬಹಿರಂಗದಲ್ಲಾಗಲಿ ಶುದ್ಧಿ ಸಾಧಿಸಲು ಸಹಾಯಕವಲ್ಲ. ನಾವು ಬದುಕುವಾಗ ಯಾವ ರೀತಿ ಯಲ್ಲಿಯೂ ಇನ್ನೊಬ್ಬರ ಬದುಕಿಗೆ ಅಡ್ಡವಾಗಬಾರದು. **'ಸರ್ವೇಜನಾಃ ಸುಖಿನೋಭವಂತು'** ಎಂಬ ತತ್ವವನ್ನು ಅನುಸರಿಸುತ್ತಾ **'ಸಹನಾವವತು ಸಹನೌಭುನಕ್ತು, ಸಹ ವೀರ್ಯಕರವಾವಹೈ ತೇಜಸ್ವಿನಾವಧೀತಮಸ್ತು ಮಾವಿದ್ವಿ ಷಾವಹೈಃ'** ಎಂಬ ಬದುಕನ್ನು ನಾವು ಸಾಧಿಸಿದಾಗ ಅಂತರಂಗ–ಬಹಿರಂಗ ಶುದ್ಧಿಗಳನ್ನು ಸಾಧಿಸುವುದು ಸಾಧ್ಯ. ಇದು ಸಿದ್ಧಿಸಿದರೆ ಪರಮಾತ್ಮನ ಒಲವು ಸುಲಭ ಎಂಬ ಅಭಿಪ್ರಾಯ ಬಸವಣ್ಣನವರದ್ದು. ಕಳ್ಳಕಾಕರು, ದರೋಡೆ ಕೋರರು, ಭಯೋತ್ಪಾದಕರು ತುಂಬಿ ತುಳುಕುತ್ತಿರುವ ಇಂದಿನ ವಿಶ್ವ ಬಸವಣ್ಣನವರ ಈ ಮಾತುಗಳನ್ನು ಅವರ ಈ ಸಾಧನೆಯನ್ನು ರೂಢಿಸಿ ಬದುಕಬೇಕಾದದ್ದು ಅವಶ್ಯ ವಲ್ಲವೇ?

ಹೀಗೆ ಯಾವ ಯಾವುದು ಬೇಡ ಎಂದು ಹೇಳಿ ದ್ದಾರೆಯೋ ಹಾಗೆಯೇ ಯಾವುದು ಬೇಕು ಎಂದು ಹೇಳಿದ್ದಾರೆ ತಮ್ಮ ಇನ್ನೊಂದು ವಚನದಲ್ಲಿ ಆ ವಚನ ಹೀಗಿದೆ.

*ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ*
*ಛಲಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ*
*ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ*
*ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ*

ಈ ವಚನದಲ್ಲಿ ದೇವರನ್ನು ಮೆಚ್ಚಿಸುವ ಪರಿ ಎಂತು ಎಂಬುದರ ಬಗ್ಗೆ ವಿಚಾರ ಮಾಡಿದ್ದಾರೆ. ಈ ಬದುಕನ್ನು ಬದುಕುವಾಗ ಮನುಷ್ಯ ಛಲದಿಂದ ಕೂಡಿರಬೇಕು. ಅದು ಶುದ್ಧ ಜೀವನ ನಡೆಸುವೆನೆಂಬ ಛಲವಾಗಿರಬೇಕು. ಇಲ್ಲಿ **'ಶರಣ'** ಶಬ್ದ ವೀರಶೈವ ಪಾರಿಭಾಷಿಕ ಶಬ್ದವಾಗಿ ಉಳಿದು ಅದರ ಅರ್ಥವ್ಯಾಪ್ತಿ ವಿಪುಲವಾದುದು, ಆಧ್ಯಾತ್ಮಿಕವಾಗಿ ಈ ಶಬ್ದದ ಅರ್ಥವಿಶಿಷ್ಟವಾದುದು. **'ಭಕ್ತ'** ಎಂಬ ಅರ್ಥವನ್ನು ಉಳ್ಳದು. ಆದರೆ ಈಗ ನಾವು ಈ ಶಬ್ದಕ್ಕೆ **'ಶುದ್ಧ ಚಾರಿತ್ರ್ಯವುಳ್ಳ ಮನುಷ್ಯ'** ಎಂಬ ಅರ್ಥಕ್ಕೆ ಸೀಮಿತಗೊಳಿಸಿಕೊಳ್ಳು ವುದು ಸೂಕ್ತ. ಬಹುಶಃ ಶುದ್ಧ ಚಾರಿತ್ರ್ಯವುಳ್ಳ ವ್ಯಕ್ತಿ ಭಕ್ತನೂ ಆಗಬಹುದು. ಶರಣನೂ ಆಗಬಹುದು. ಬಸವಣ್ಣನವರೂ ಇದೇ ದೃಷ್ಟಿಯನ್ನು ಅನುಲಕ್ಷದಲ್ಲಿರಿಕೊಂಡಿರಬಹುದು. ಈ ಶರಣ, ಶುದ್ಧ ಚಾರಿತ್ರಗಳಿಸಲು ಪರಧನ, ಪರವಧು, ಪರದೈವವನ್ನು ಒಲ್ಲದೆ, ಲಿಂಗ ಜಂಗಮಗಳಲ್ಲಿ ಬೇಧವೆಣಿ ಸದೆ, ಪ್ರಸಾದದಲ್ಲಿ ನಂಬಿಕೆಯಿಟ್ಟು ಬದುಕುವ ಛಲವನ್ನು ಹೊಂದಿರಬೇಕು, ಈ ಛಲಹೊಂದಿ ಬದುಕದಿದ್ದರೆ ಪರಮಾತ್ಮ ಒಲಿಯುವುದಿಲ್ಲ ಎಂದು ಹೇಳಿದ್ದಾರೆ.





ಇಲ್ಲಿ, ಪರಧನ, ಪರವಧುಗಳ ಬಗ್ಗೆ ಆಸೆ ಮಾಡದೆ ಬದುಕಬೇಕೆಂಬುದು ಸುಲಭವಾಗಿ ಅರ್ಥವಾಗುತ್ತದೆ. ಈ ಹಿಂದೆ ಹೇಳಿದಂತೆ ಕಳ್ಳತನಮಾಡದೆ ಇನ್ನೊಬ್ಬರ ವಸ್ತುವಿಗೆ ಆಸೆಪಡದೆ ಬದುಕಬೇಕೆಂಬುದು ಸ್ಪಷ್ಟವಾಗುತ್ತದೆ. ಅದರ ಲ್ಲಿಯೂ ವೀರಶೈವ ಧರ್ಮ ಪರಸತಿಯ ಬಗ್ಗೆ ವಿಶಿಷ್ಟ ಗೌರವವನ್ನು ಹೊಂದಿದೆ. ಆ ಧರ್ಮದ ನೆರಳಲ್ಲಿ ಬದುಕುವ ನಾವು ಅಲ್ಲಿನ ವಿಚಾರಗಳನ್ನು ಮಾನ್ಯಮಾಡಬೇಕಾದದ್ದು ಕರ್ತವ್ಯ. ಈ ಧರ್ಮದಲ್ಲಿ ಸ್ತ್ರೀಗೆ ವಿಶಿಷ್ಟ ಸ್ಥಾನ ಕೊಟ್ಟಿರುವುದು ಸ್ಪಷ್ಟವಿದೆ. **'ಯತ್ರನಾರ್ಯಾಸ್ತು ಪೂಜ್ಯಂತೆ ತತ್ರ ರಮತೇ ದೇವತಾಃ'** ಎಂಬ ಆರ್ಯೋಕ್ತಿ ಸ್ತ್ರೀಗೆ ಕೊಟ್ಟಿರುವ ಪೂಜ್ಯ ಸ್ಥಾನವನ್ನು ನಿರೂಪಿಸುತ್ತದೆ. ಆರ್ಯ ಸಂಸ್ಕೃತಿಯಲ್ಲಿ ಸ್ತ್ರೀ ಮನೆಯ ಯಜಮಾನಿಯಾಗಿದ್ದಳು. ಈ ಹಿನ್ನಲೆಯ ಬದುಕನ್ನು ಹೊಂದಿರುವ ಭಾರತೀಯ ಅನ್ಯ ಸ್ತ್ರೀಯನ್ನು ಗೌರವದಿಂದ ಕಾಣಬೇಕೆಂಬ ಜೀವನ ತತ್ತ್ವವನ್ನು ನಮ್ಮ ಸಂಸ್ಕೃತಿ ನೀಡಿದೆ. ಇದನ್ನು ವಚನಕಾರರು ಅತ್ಯಂತ ಗೌರವ ದಿಂದ ಅನುಸರಿಸಿದ್ದಾರೆ. **'ಗಂಡನುಳ್ಳಮ್ಮನ ಗೌರಿ ಎಂದು ಕಂಡಡೆ ಸಗ್ಗದಲಿದಿಂಡುಗೆಡೆದಿಪ್ಪನಾತ'** ಎಂದು ಸಾರಿದರು. ಬಸವಣ್ಣನವರು ಪರಸ್ತ್ರೀಗೆ ಅಳುಪದೆ ಬದುಕುವ ಬದುಕು ಪವಿತ್ರವಾದುದು. ದೇವರನ್ನು ಮೆಚ್ಚಿಸುವಂತಹುದು. ಆದುದ ರಿಂದ ಪರವಧುವನೊಲ್ಲೆನೆಂಬ ಛಲವನ್ನು ಮನುಷ್ಯ ಹೊಂದಿರಬೇಕು ಎಂದು ಹೇಳಿದ್ದಾರೆ.

ಮುಂದಿನ ಸಾಲಿನಲ್ಲಿ **'ಪರದೈವ'** ಎಂಬ ಮಾತು ಬಂದಿದೆ. **'ದೇವನೊಬ್ಬ ನಾಮ ಹಲವು'** ಎಂಬ ನಿಲವನ್ನು ತಳೆದಿದ್ದ ಬಸವಣ್ಣನವರೇ ಏಕದೇವೋಪಾಸನೆಯನ್ನು ಪ್ರತಿಪಾದಿಸಿದ್ದಾರೆ. ಆ ದೇವರು ಶಿವ ಆಗಬಹುದು, ವಿಷ್ಣು ಆಗಬಹುದು, ಬ್ರಹ್ಮ ಆಗಬಹುದು. ಯಾವ ಹೆಸರಿನಿಂದ ಕರೆದರೂ ದೈವತ್ವ ಒಂದೇ ಎಂಬ ಸೂತ್ರದಲ್ಲಿ ನಂಬಿಕೆ ತಳೆದಿದ್ದವರು ಬಸವಣ್ಣನವರು. ಆದುದರಿಂದ ಒಂದು ದೃಷ್ಟಿ ಹೊಂದಿ ಒಂದು ದೈವವನ್ನು ನಂಬಿ, ಶರಣಾಗಬೇಕು. ಇಂದು ಒಂದು ದೈವ, ನಾಳೆ ಒಂದು ದೈವ ಎಂದು ಚಂಚಲತೆಯನ್ನು ಹೊಂದಬಾರದು. ದೈವೋಪಾಸನೆ ನಮ್ಮ ಶ್ರೇಯಸ್ಸಿಗೆ, ನಮ್ಮ ನೆಮ್ಮದಿಗೆ, ಆ ನೆಮ್ಮದಿ ಶ್ರೇಯಸ್ಸು ನಮಗೆ ಒಂದು ದೈವದಿಂದ ದೊರೆಯಲಿಲ್ಲವೆಂದು ಮತ್ತೊಂದು ದೈವಕ್ಕೆ ಶರಣಾಗಬಾರದು, ಎಂಬುದು ಅಣ್ಣನವರ ಅಭಿಪ್ರಾಯ. ನೂರೆಂಟು ಧರ್ಮ, ನೂರೆಂಟು ದೈವ, ನೂರೆಂಟು ಆಚರಣೆಗಳಿಂದ ತುಂಬಿ ತುಳುಕುತ್ತಿದ್ದ ನಮ್ಮ ಸಮಾಜದಲ್ಲಿನ ಮೌಢ್ಯವನ್ನು ಕಂಡು ರೋಸಿ ಈ ವಿವಿಧತೆ ಬೇಡ. ಮನುಕುಲದ ಉದ್ಧಾರಕ್ಕೆ ಸಾಧಕವಾದ ಧರ್ಮ ಮನುಷ್ಯ ಮನುಷ್ಯನಾಗಿ ಬದುಕಲು ಬಿಡುವ ಧರ್ಮ. ಅದನ್ನು ಆಚರಿಸಬೇಕು ಆ ಧರ್ಮಕ್ಕೆ ಒಂದು ಅಧಿದೇವತೆ ಸಾಕು. ಆ ದೈವವನ್ನು ನಂಬಿ ಆಚರಣೆ ಮಾಡ ಬೇಕು ಎಂಬ ದೃಷ್ಟಿಯಲ್ಲಿ 'ಪರದೈವ' ಒಲ್ಲೆನೆಂಬ ಛಲವನ್ನು ಮನುಷ್ಯ ಹೊಂದಿದರೆ ದೈವ ಮೆಚ್ಚುವನು ಎಂದು ಹೇಳಿದ್ದಾರೆ.

ಮುಂದಿನ ಸಾಲಿನಲ್ಲಿ **'ಲಿಂಗ–ಜಂಗಮ'** ಒಂದೆಂಬ ನಿಲುವನ್ನು ಮನುಷ್ಯ ತಾಳಬೇಕೆಂದಿದ್ದಾರೆ, ಈ ಎರಡೂ ಶಬ್ದಗಳೂ ವೀರಶೈವ ಧರ್ಮದಲ್ಲಿ ವಿಶಿಷ್ಟವಾದುವು. **'ಲಿಂಗ'**ದ ಬಗ್ಗೆ ವಿಶಿಷ್ಟವಾದ ಕಲ್ಪನೆ ಈ ಧರ್ಮದಲ್ಲಿದೆ.

**'ಲೀಯತೇಗಮ್ಯತೇಯತ್ರಯೇನ ಸರ್ವಂ ಚರಾಚರಂ**
**ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ವ ಪರಾಯಣೈಃ'**

ಎಂದು ಮಾಯಿ ದೇವರು ಲಿಂಗದ ಬಗ್ಗೆ ವಿವರ ನೀಡಿದ್ದಾರೆ. ಇದನ್ನೇ ವಚನಕಾರರು ಲಿಂಗವೆಂಬುದು ಪರ ಶಕ್ತಿಯುತಪರಶಿವನ ನಿಜದೇಹ,

*ಲಿಂಗವೆಂಬುದು ಪರಶಿವನ ಘನತೇಜ'*
*ಲಿಂಗವೆಂಬುದು ಪರಶಿವನ ನಿರತಿಶಯಾನಂದಸುಖವು*

ಎಂಬುದಾಗಿ, **'ಲಿಂಗದ ನಿಲವ'**ನ್ನು ನಿರೂಪಿಸಿದ್ದಾರೆ. ಹೀಗಾಗಿ ಲಿಂಗ ವೀರಶೈವ ಧರ್ಮದಲ್ಲಿ ವಿಶಿಷ್ಟವಾದು ದಾಗಿದೆ. ಲಿಂಗದಿಂದಲೇ ಸರ್ವ 'ಜಗತ್ತಿನ ಆವಿರ್ಭವ, ಲಿಂಗದಲ್ಲಿಯೇ ಸರ್ವ ಜಗತ್ತಿನಲಯ, ಲಿಂಗ ಆ ಪರಮಾತ್ಮನ ಚುಳುಕಾದ ರೂಪ, ಬಸವಣ್ಣನವರು ಲಿಂಗದ ಸ್ವರೂಪವನ್ನು ಕುರಿತು

*ಜಗದಗಲ ಮುಗಿಯಗಲ ಮಿಗೆಯಗಲ ನಿಮ್ಮಗಲ*
*ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,*
*ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ*
*ಅಗಮ್ಯ, ಅಗೋಚರ ಅಪ್ರತಿಮಲಿಂಗವೆ*
*ಕೂಡಲಸಂಗಮದೇವಾ*
*ಎನ್ನಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ'*

ಎಂದು ಹೇಳಿದ್ದಾರೆ. ಲಿಂಗದ ನಿಲುವು ಅಗಮ್ಯ ಅಗೋಚರ ಅಪ್ರತಿಮ ಎಂದು ಹೇಳಿದ್ದಾರೆ.

'ಜಂಗಮ' ಶಬ್ದವೂ ಅಷ್ಟೆ ವಿಶಿಷ್ಟವಾದುದು. ಚೈತನ್ಯ ಎಂಬ ಅರ್ಥವಿದ್ದರೂ ವಚನಕಾರರು ಜಂಗಮವನ್ನು ಪರಶಿವನ ಅವತಾರವೆಂದು ಭಾವಿಸಿದರು. 'ಸಿದ್ಧಾಂತ ಶಿಖಾಮಣಿ'ಯಲ್ಲಿ ಜಂಗಮನನ್ನು ಕುರಿತು ಹೇಳುವಾಗ

*'ಏಕಏವಶಿವಃ ಸಾಕ್ಷಾತ್ಸರ್ವಾನುಗ್ರಹಕಾರಃ ಪ್ರಭುಃ*
*ಗುರು ಜಂಗಮ ಲಿಂಗಾತ್ಮವರ್ತತೇ ಭಕ್ತಿ ಮುಕ್ತಿದಃ*

ಎಂದೂ,

*'ಜಿತಕಾಮಾಜಿತಕ್ರೋಧಾ ಮೋಹಗ್ರಂಥಿ ವಿಭೇಧನಃ*
*ಸಮಲೋಷ್ಟಾಶ್ಮ ಕನಕಾಃ ಸಾಧನಃ ಶಿವಯೋಗಿನಃ*

ಎಂದು ಹೇಳಲಾಗಿದೆ. ಲಿಂಗವು ಎರಡು ವಿಧ. ಸ್ಥಿರಲಿಂಗ-ಚರಲಿಂಗ, ಈ ಚರಲಿಂಗವನ್ನೇ ಜಂಗಮ ಎಂದು ಗುರುತಿಸಲಾಗಿದೆ. ಈ ಚರಲಿಂಗದಲ್ಲಿ **'ಸದಾಕಾಲಂ ನ ಸತ್ಯೇ ಮಹೇಶ್ವರಃ'** ಎಂದು ಹೇಳಲಾಗಿದೆ. ಆದುದರಿಂದ ಲಿಂಗಜಂಗಮದಲ್ಲಿ ಭೇದವನ್ನು ಹುಡುಕಬಾರದು ಎಂಬುದು ಬಸವಣ್ಣನವರ ಅಭಿಪ್ರಾಯ.

**'ಪ್ರಸಾದದಿಟ'**ವೆಂಬ ಛಲಬೇಕು ಎಂದು ಹೇಳುವಲ್ಲಿ ವೀರಶೈವದಲ್ಲಿ ಪ್ರಸಾದಕ್ಕೆ ಇರುವ ಗೌರವವನ್ನು ಕುರಿತು ಹೇಳಿದ್ದಾರೆ. ಪ್ರಸಾದ ಎಂಬ ಮಾತನ್ನು ವ್ಯಾಪಕ ಅರ್ಥದಲ್ಲಿ ಶರಣರು ಗುರುತಿಸಿದ್ದಾರೆ. ಈ ಸೃಷ್ಟಿಯೇ ಶಿವನ ಪ್ರಸಾದ ಎಂದು ಗ್ರಹಿಸಿದ್ದರು ಶರಣರು. ಈ ಪ್ರಸಾದವನ್ನು ಗ್ರಹಿಸುವುದು ಶಿವನಲ್ಲಿ ಐಕ್ಯವನ್ನು ಸಾಧಿಸುವುದು, ಎರಡೂ ಒಂದೇ ಎಂಬ ಅಭಿಪ್ರಾಯ ಅವರದು. ಹಾಗಾಗಿ ದಾಸಿಮಯ್ಯ **'ತಕ್ಕೈಸಿ ನಿಮ್ಮವನಪ್ಪಿಕೊಂಡಡೆ ಅದೇ ನಿಶ್ಚಯಪ್ರಸಾದ'** ಎಂದು ಹೇಳಿದರು. ಪ್ರತಿಯೊಂದು ಇಂದ್ರಿಯ ಮುಖದಿಂದ ತಾನು ಅನುಭವಿಸುವ ಪದಾರ್ಥಗಳನ್ನು ಮೊದಲು ಲಿಂಗಕ್ಕೆ ಸಮರ್ಪಿಸಿ, ಬಳಿಕ ಅರ್ಪಿತ ಪದಾರ್ಥವನ್ನು ಅವಧಾನ ಭಕ್ತಿಪೂರ್ವಕ ಲಿಂಗಮುಖದಿಂದ ಸ್ವೀಕರಿಸುವುದೇ ಪ್ರಸಾದ ಎಂದು ಮಾಯಿದೇವರು ನಿರೂಪಿಸುವರು. ಆದುದರಿಂದ ನಾವು ನೋಡುವ ನೋಟ, ಆಘ್ರಾಣಿಸುವ ಸುವಾಸನೆ, ಕೇಳುವ ಧ್ವನಿ, ಆಸ್ವಾದಿಸುವ ರುಚಿ, ಸ್ಪರ್ಶಿಸುವ ಮೃದುತ್ವ ಎಲ್ಲವೂ ಪರಮ್ಮಾನ ಕೃಪೆ. ಅದನ್ನು ಮೊದಲು ಪರಮಾತ್ಮನಿಗೆ ಅರ್ಪಿಸಿ ಅದನ್ನು ಆತನ ಕೃಪೆಯೆಂದು ಪ್ರಸಾದ ರೂಪದಲ್ಲಿ ಸ್ವೀಕರಿಸುವಾಗ ಆ ಪ್ರಸಾದ ದಿಟ,ಎಂಬ ಭಾವವನ್ನು ತಳೆಯಬೇಕೆಂದಿದ್ದಾರೆ, ಬಸವಣ್ಣನವರು. ಆದುದರಿಂದಲೇ ಛಲ ಬೇಕು ಶರಣಂಗೆ ಪ್ರಸಾದ ದಿಟವೆಂಬ ಮಾತನ್ನು ಹೇಳಿದ್ದಾರೆ. ಈ ಎಲ್ಲಾ 'ಬೇಕು'ಗಳನ್ನು ಸಾಧಿಸಿದರೆ ಪರಮಾತ್ಮ ಮೆಚ್ಚುವನು. ಪರಮಾತ್ಮನ ಮೆಚ್ಚುಗೆಗೆ ಪಾತ್ರರಾದರೆ ನಾವು ಆ ದೈವದಲ್ಲಿ ಐಕ್ಯವನ್ನು ಸಾಧಿಸಬಹುದು. ಆದುದರಿಂದ ಈ ಬೇಕು-ಬೇಡಗಳ ಬಗೆಗೆ ಎಚ್ಚರವಹಿಸಿ ಮಾನವ ಮಹಾನುಭಾವನಾಗಬೇಕೆಂದು ಸೂಚಿಸಿದ್ದಾರೆ ಬಸವಣ್ಣನವರು. ಕಲುಷಿತ ಸಮಾಜದಲ್ಲಿ ಬದುಕುತ್ತಿರುವ ನಾವುಗಳು ಅಣ್ಣನವರ ಈ ಮಾತುಗಳನ್ನು ಅನುಲಕ್ಷಿಸಿ ಆಚರಣೆಗೆ ತಂದುದಾದರೆ ಇದೇ ಸುಖೀ ಸಮಾಜವಾಗುವುದರಲ್ಲಿ ಸಂಶಯವಿಲ್ಲ.

*

ನೀರಕಂಡಲ್ಲಿ ಮುಳುಗುವರಯ್ಯ
ಮರವ ಕಂಡಲ್ಲಿ ಸುತ್ತುವರಯ್ಯ
ಬತ್ತುವ ಜಲವ, ಒಣಗುವ ಮರವ
ಮೆಚ್ಚುದವರು ನಿಮ್ಮನೆತ್ತ ಬಲ್ಲರು
ಕೂಡಲಸಂಗಮದೇವ

* * *

ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು
ನೆನೆದು ಮೃದುವಾಗಬಲ್ಲದೆ ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರ ವಿಧಿ ಎನಗಾಯಿತ್ತು
ಕೂಡಲಸಂಗಮದೇವಾ

* * *

ದೇವಲೋಕ ಮರ್ತ್ಯಲೋಕವೆಂಬುದು ಬೇರೆ
ಮತ್ತುಂಟೆ? ಈ ಲೋಕದೊಳಗೆ ಮತ್ತೆ
ಅನಂತಲೋಕ ! ಶಿವಲೋಕ ಶಿವಾಚಾರವಯ್ಯಾ,
ಭಕ್ತನಿರ್ದ ಠಾವೇ ದೇವಲೋಕ. ಭಕ್ತನಂಗಳವೇ
ವಾರಣಾಸಿ. ಕಾಯವೇ ಕೈಲಾಸ! ಇದು ಸತ್ಯ
ಕೂಡಲಸಂಗಮದೇವಾ.
-ಬಸವಣ್ಣನವರು





## ಬಸವಣ್ಣನವರ ದೃಷ್ಟಿಯಲ್ಲಿ ಬೇಡ-ಬೇಕುಗಳು

* -ಪ್ರೊ. ಆರ್. ರಾಚಪ್ಪ

ಹನ್ನೆರಡನೆಯ ಶತಮಾನದಲ್ಲಿ ಮಾನವನಾಗಿ ಹುಟ್ಟಿ ಮಹಾನುಭಾವತ್ವವನ್ನು ಪಡೆದ ಕ್ರಾಂತಿವಾದಿ, ಸಮಾಜ ಸುಧಾರಕ, ಮಹಾದಾರ್ಶನಿಕ, ಹುತಾತ್ಮರೆನಿಸಿದ ಬಸವಣ್ಣನವರು ಮನುಷ್ಯನಾಗಿ ಬದುಕುವುದು ಹೇಗೆಂದು ಸ್ಪಷ್ಟಪಡಿಸಿದ್ದಾನೆ. ತಮ್ಮ ಕಾಲಕ್ಕೆ ಸಮಾಜದಲ್ಲಿ ತುಂಬಿದ್ದ ಜಾತಿವಾದ, ಮೇಲು-ಕೀಳು ಎಂಬ ತಾರತಮ್ಯಗಳನ್ನು ಕಂಡು ರೋಸಿಹೋಗಿ ಅವುಗಳ ವಿರುದ್ಧ ಸಿಡಿದೆದ್ದರು. ತಮ್ಮ ಸುತ್ತಮುತ್ತಲಿನ ಆಚರಣೆ, ಸಂಪ್ರದಾಯಗಳು, ಕುರುಡು ನಂಬಿಕೆಗಳನ್ನು ಖಂಡಿಸುತ್ತಾ ಮೇಲು-ಕೀಳುಗಳು, ಜಾತಿಗಳು, ಮನುಷ್ಯ ನಿರ್ಮಿತವೇ ಹೊರತು ಅನ್ಯಥಾ ಅಲ್ಲ. ದೇವರ ಹೆಸರಿನಲ್ಲಿ ನಡೆಯುವ ಶೋಷಣೆ ಎಂದು ಸಾರಿದರು. ಹೆಣ್ಣು ಗಂಡುಗಳಿಗೆ ಇದ್ದ ನಿರ್ಬಂಧಗಳು, ಸೌಲಭ್ಯಗಳು ಅರ್ಥವಿಲ್ಲದವು ಎಂದು ಮನಗಂಡು ಪುರುಷ ಪ್ರಧಾನ ಸಮಾಜ ಸ್ತ್ರೀಯರ ಬಗೆಗೆ ತಳೆದಿದ್ದ ನಿಲವನ್ನು ಖಂಡಿಸಿದರು. ಪುರುಷನಂತೆ ಸ್ತ್ರೀಯು ದೀಕ್ಷಾಯೋಗ್ಯಳು. ಆಕೆಗೆ ಸಮಾನ ಹಕ್ಕು ಸಮಾಜದಲ್ಲಿರಬೇಕೆಂದು ವಾದಿಸಿದರು.

ಹೀಗೆ ಜಾತಿ-ಮತಗಳ ಬೇಧ, ಮೇಲು-ಕೀಳು ಎಂಬ ತಾರತಮ್ಯ ವರ್ತನೆಗಳನ್ನು ಖಂಡಿಸುತ್ತ ಮನುಷ್ಯರೆಲ್ಲಾ ಒಂದೇ ಎಂಬ ತತ್ತ್ವವನ್ನು ಸಾರಿದರು. ಕೀಳು ವರ್ಗದವರ ಬಳಿ ಹೋಗಿ ಅವರನ್ನು ತಿದ್ದಿ ಅವರಲ್ಲಿ ನವ ಚೈತನ್ಯ ಮೂಡಲು ಕಾರಣರಾದರು. ಜನಭಾಷೆಯಲ್ಲಿ ವಿಚಾರವನ್ನು ಹೇಳುತ್ತಾ ಹೊರಟ ಬಸವಣ್ಣನವರು ಸಾಹಿತ್ಯಕ್ಕೆ ಹೊಸ ತಿರುವನ್ನು ನೀಡಿದರು. ಪಂಡಿತಮಾನ್ಯವಾಗಿದ್ದ ಸಾಹಿತ್ಯ ಶ್ರೀಸಾಮಾನ್ಯರಿಗೆ ವೇದ್ಯವಾಗುವಂತೆ ಮಾಡಿದ ಕೀರ್ತಿ ಬಸವಾದಿ ವಚನಕಾರರದ್ದು. **'ವಚನ'** ಎಂಬ ವಿಶಿಷ್ಟ ಪ್ರಕಾರದ ಹೆಸರಿನಲ್ಲಿ ಜೀವನವನ್ನು ಬಿಂಬಿಸುವ ಮಹತ್ಸಾಧನೆಯನ್ನು ಮಾಡಿದರು.

ಜೀವನ ಎಂದರೇನು? ಜೀವನದಲ್ಲಿ ಬದುಕುವ ಕ್ರಮ ಎಂತಹುದಿರಬೇಕು? ಯಾವ ತೆರನ ಬದುಕನ್ನು ಅನುಸರಿಸಬಾರದು? ಇತ್ಯಾದಿ ಅಂಶಗಳಲ್ಲದೆ ಸಮಾಜ, ಸಮಾಜದಲ್ಲಿನ ಆಗು ಹೋಗುಗಳು, ಅಲ್ಲಿನ ನ್ಯೂನತೆಗಳು, ಅವುಗಳನ್ನು ಸರಿಪಡಿಸುವ ವಿಧಾನ ಇತ್ಯಾದಿಗಳನ್ನು ವಿವರಿಸುತ್ತಾ ಹೋರಾಟದ ಬದುಕನ್ನು ನಡೆಸಿದ ಬಸವಣ್ಣನವರು ಸೂತ್ರ ರೂಪದಲ್ಲಿ ಮನುಷ್ಯ ಹೇಗೆ ಬದುಕಬೇಕು? ಬದುಕಿನಲ್ಲಿ ಯಾವುದನ್ನು ಮಾಡಬಾರದು ಎಂಬಂಶಗಳನ್ನು ಸರಳವಾಗಿ ನಿರೂಪಿಸಿದ್ದಾರೆ. ಸಾಮಾಜಿಕ ಅನ್ಯಾಯಗಳ ಬಗ್ಗೆ ಸಿಡಿದೆದ್ದ ಅವರು ತಮ್ಮ ಸುತ್ತಮುತ್ತಣ ಜನ ಬದುಕುತ್ತಿದ್ದ ಮಾರ್ಗವನ್ನು ಕಂಡು ಹೇಸಿ, ಇದಲ್ಲ ಹೀಗೆ ಬದುಕಿ ಎಂದು ನಯವಾಗಿ ಹೇಳಿದರು, ಕೇಳದಿದ್ದಾಗ ಕೆರಳಿ ಹೇಳಿದರು, ಚಾಟಿ ಏಟಿನಂತೆ ಚುರುಕಾಗಿ ಹೇಳಿದರು.

ಅವರ ವಚನಗಳಲ್ಲಿ ಒಂದು ಯಾವುದು ಬೇಕು ಎಂದು ಸೂಚಿಸಿದರೆ, ಇನ್ನೊಂದು ವಚನ ಯಾವುದು ಬೇಡ ಎಂಬುದನ್ನು ಸೂಚಿಸುತ್ತದೆ. ಈಗ ಆ ವಚನಗಳನ್ನು ವಿಶ್ಲೇಷಿಸಿ ನೋಡೋಣ.

***ಕಳಬೇಡ, ಕೊಲಬೇಡ***
***ಹುಸಿಯ ನುಡಿಯಲು ಬೇಡ***
***ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ***
***ತನ್ನ ಬಣ್ಣಿಸಬೇಡ, ಇದಿರಹಳಿಯಲುಬೇಡ***
***ಇದೆ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ***
***ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವಪರಿ***

ತಾತ್ವಿಕವಾಗಿ ವಿಚಾರ ಮಾಡಿದಾಗ ಪರಮಾತ್ಮನ ಒಂದು ಅಂಶವಾದ ಈ ಮಾನವ ಮತ್ತೆ ಆ ಪರಮಾತ್ಮನಲ್ಲಿ ಐಕ್ಯತೆಯನ್ನು ಸಾಧಿಸಬೇಕೆಂಬ ವಿಚಾರ ವೀರಶೈವ ತತ್ತ್ವದ ಮುಖ್ಯಸಾರ. ಇದನ್ನು ಗಳಿಸುವ ಪರಮ ಗುರಿಯನ್ನು ಹೊಂದಿ ಆ ಕಡೆಗೆ ದೃಷ್ಟಿಯನ್ನು ಕೇಂದ್ರೀಕರಿಸಿ ಐಕ್ಯತೆಯನ್ನು ಸಾಧಿಸುವ ಮಹಾಗುರಿಯನ್ನು

* 'ರಜತಗಿರಿ', ೧೮೫, ೧ನೇ 'ಬಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು-೫೬೦ ೦೧೦.

ಮಾನವ ಹೊಂದಬೇಕು. ಆ ಪರಮಾತ್ಮ ಒಲಿದರೆ ಮಾತ್ರ ಇದು ಸಾಧ್ಯ. ನಾವು ಎಷ್ಟೇ ಸಾಧನೆ ಮಾಡಿದರೂ ಆ ಪರಮಾತ್ಮನು ಒಲಿಯದೆ ಫಲವಿಲ್ಲ. ಆತನನ್ನು ಒಲಿಸಿಕೊಳ್ಳಬೇಕಾದ್ದು ಅಗತ್ಯ. ಆತನೊಲುಮೆ ಗಳಿಸಲು ಇರುವ ಮಾರ್ಗ ಶುದ್ಧ ಜೀವನ ನಡೆಸುವುದು. ಅಂತರಂಗ-ಬಹಿರಂಗಗಳೆರಡೂ ಶುದ್ಧ ವಾಗಿರಬೇಕು. ತೋರಿಕೆಯ ಭಕ್ತಿಯಿಂದ ಪರಮಾತ್ಮನು ಒಲಿಯುವುದಿಲ್ಲ. ಅದು ಕುಂಬಳಕಾಯಿಗೆ ಕಬ್ಬಿಣದ ಕಟ್ಟು ಕೊಟ್ಟಂತೆ. ಅದು ಕೊಳೆಯುವುದಲ್ಲದೆ ಬಲು ಹಾಗದು. ಮನ ಶುದ್ಧವಿಲ್ಲದ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ. ಆದುದರಿಂದ ಅಂತರಂಗ ಬಹಿರಂಗಗಳೆರಡೂ ಶುದ್ಧವಾಗಿರಬೇಕೆಂದು ಬಸವಣ್ಣನವರು ತಿಳಿಸಿ ಆ ಪರಮಾತ್ಮನನ್ನು ಒಲಿಸಲು ಇರುವ ಮಾರ್ಗ ಇದೊಂದೇ ಎಂದು ಹೇಳಿದ್ದಾರೆ.

ಈ ಅಂತರಂಗ-ಬಹಿರಂಗ ಶುದ್ಧವಾಗುವುದು ಹೇಗೆ ಎಂಬುದಕ್ಕೆ **'ಕಳಬೇಡ-ಕೊಲಬೇಡ'** ಇತ್ಯಾದಿ ಬೇಡಗಳನ್ನು ಹೇಳಿದ್ದಾರೆ. ನಾವು ಬದುಕಬೇಕು ಇನ್ನೊಬ್ಬರ ಹಂಗಿನಲ್ಲಲ್ಲ. ನಾವು ಬದುಕಬೇಕು, ಇನ್ನೊಬ್ಬರ ಸ್ವತ್ತನ್ನು ಅಪಹರಿಸಿಯಲ್ಲ, ನಾವು ಬದುಕಬೇಕು, ಜೀವನವನ್ನು ಕಸಿದುಕೊಂಡಲ್ಲ. ನಾವು ಬದುಕಬೇಕು, ಇನ್ನೊಬ್ಬರಿಗೆ ಮುನಿದಲ್ಲ. ನಾವು ಬದುಕಬೇಕು, ಇನ್ನೊಬ್ಬರಿಗೆ ಅಸಹ್ಯಪಟ್ಟು ಅಲ್ಲ. ಆದುದರಿಂದ ಇನ್ನೊಬ್ಬರ ವಸ್ತುವಿಗೆ ಆಸೆಪಡದೆ ಇನ್ನೊಬ್ಬರ ಜೀವಕ್ಕೆ ಮುಳುವಾಗಿ ಬದುಕುವ ಬದುಕು ಶುದ್ಧ ಅಲ್ಲ, ಕಳ್ಳತನ ಮಾಡುವುದು, ಕೊಲೆ ಮಾಡುವುದು, ಸುಳ್ಳುಹೇಳುವುದು; ಇನ್ನೊಬ್ಬರನ್ನು ಹಳಿಯುವುದು, ಇನ್ನೊಬ್ಬರಿಗೆ ಮುನಿಯುವುದು, ತಾನುಂಟೋ, ಮೂರು ಲೋಕ ಉಂಟೋ ಎಂದು ಮೆರೆಯುವುದು ಇತ್ಯಾದಿಗಳು, ಅಂತರಂಗದಲ್ಲಾಗಲಿ, ಬಹಿರಂಗದಲ್ಲಾಗಲಿ ಶುದ್ಧಿ ಸಾಧಿಸಲು ಸಹಾಯಕವಲ್ಲ. ನಾವು ಬದುಕುವಾಗ ಯಾವ ರೀತಿ ಯಲ್ಲಿಯೂ ಇನ್ನೊಬ್ಬರ ಬದುಕಿಗೆ ಅಡ್ಡವಾಗಬಾರದು. **'ಸರ್ವೇಜನಾಃ ಸುಖಿನೋಭವಂತು'** ಎಂಬ ತತ್ವವನ್ನು ಅನುಸರಿಸುತ್ತಾ **'ಸಹನಾವವತು ಸಹನೌಭುನಕ್ತು, ಸಹ ವೀರ್ಯಕರವಾವಹೈ ತೇಜಸ್ವಿನಾವಧೀತಮಸ್ತು ಮಾವಿದ್ವಿ ಷಾವಹೈಃ'** ಎಂಬ ಬದುಕನ್ನು ನಾವು ಸಾಧಿಸಿದಾಗ ಅಂತರಂಗ-ಬಹಿರಂಗ ಶುದ್ಧಿಗಳನ್ನು ಸಾಧಿಸುವುದು ಸಾಧ್ಯ. ಇದು ಸಿದ್ಧಿಸಿದರೆ ಪರಮಾತ್ಮನ ಒಲವು ಸುಲಭ ಎಂಬ ಅಭಿಪ್ರಾಯ ಬಸವಣ್ಣನವರದ್ದು. ಕಳ್ಳಕಾಕರು, ದರೋಡೆ ಕೋರರು, ಭಯೋತ್ಪಾದಕರು ತುಂಬಿ ತುಳುಕುತ್ತಿರುವ ಇಂದಿನೀ ವಿಶ್ವ ಬಸವಣ್ಣನವರ ಈ ಮಾತುಗಳನ್ನು ಅವರ ಈ ಸಾಧನೆಯನ್ನು ರೂಢಿಸಿ ಬದುಕಬೇಕಾದದ್ದು ಅವಶ್ಯ ವಲ್ಲವೇ?

ಹೀಗೆ ಯಾವ ಯಾವುದು ಬೇಡ ಎಂದು ಹೇಳಿ ದ್ದಾರೆಯೋ ಹಾಗೆಯೇ ಯಾವುದು ಬೇಕು ಎಂದು ಹೇಳಿದ್ದಾರೆ ತಮ್ಮ ಇನ್ನೊಂದು ವಚನದಲ್ಲಿ ಆ ವಚನ ಹೀಗಿದೆ.

*ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ*
*ಛಲಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ*
*ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ*
*ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ*

ಈ ವಚನದಲ್ಲಿ ದೇವರನ್ನು ಮೆಚ್ಚಿಸುವ ಪರಿ ಎಂತು ಎಂಬುದರ ಬಗ್ಗೆ ವಿಚಾರ ಮಾಡಿದ್ದಾರೆ. ಈ ಬದುಕನ್ನು ಬದುಕುವಾಗ ಮನುಷ್ಯ ಛಲದಿಂದ ಕೂಡಿರಬೇಕು. ಅದು ಶುದ್ಧ ಜೀವನ ನಡೆಸುವೆನೆಂಬ ಛಲವಾಗಿರಬೇಕು. ಇಲ್ಲಿ **'ಶರಣ'** ಶಬ್ಧ ವೀರಶೈವ ಪಾರಿಭಾಷಿಕ ಶಬ್ದವಾಗಿ ಉಳಿದು ಅದರ ಅರ್ಥವ್ಯಾಪ್ತಿ ವಿಪುಲವಾದುದು, ಆಧ್ಯಾತ್ಮಿಕವಾಗಿ ಈ ಶಬ್ದದ ಅರ್ಥವಿಶಿಷ್ಟವಾದುದು. **'ಭಕ್ತ'** ಎಂಬ ಅರ್ಥವನ್ನು ಉಳ್ಳದು. ಆದರೆ ಈಗ ನಾವು ಈ ಶಬ್ದಕ್ಕೆ **'ಶುದ್ಧ ಚಾರಿತ್ರ್ಯ ವುಳ್ಳ ಮನುಷ್ಯ'** ಎಂಬ ಅರ್ಥಕ್ಕೆ ಸೀಮಿತಗೊಳಿಸಿಕೊಳ್ಳು ವುದು ಸೂಕ್ತ. ಬಹುಶಃ ಶುದ್ಧ ಚಾರಿತ್ರ್ಯವುಳ್ಳ ವ್ಯಕ್ತಿ ಭಕ್ತನೂ ಆಗಬಹುದು. ಶರಣನೂ ಆಗಬಹುದು. ಬಸವಣ್ಣನವರೂ ಇದೇ ದೃಷ್ಟಿಯನ್ನು ಅನುಲಕ್ಷದಲ್ಲಿರಿಕೊಂಡಿರಬಹುದು. ಈ ಶರಣ, ಶುದ್ಧ ಚಾರಿತ್ರಗಳಿಸಲು ಪರಧನ, ಪರವಧು, ಪರದೈವವನ್ನು ಒಲ್ಲದೆ, ಲಿಂಗ ಜಂಗಮಗಳಲ್ಲಿ ಬೇಧವೆಣಿ ಸದೆ, ಪ್ರಸಾದದಲ್ಲಿ ನಂಬಿಕೆಯಿಟ್ಟು ಬದುಕುವ ಛಲವನ್ನು ಹೊಂದಿರಬೇಕು, ಈ ಛಲಹೊಂದಿ ಬದುಕದಿದ್ದರೆ ಪರಮಾತ್ಮ ಒಲಿಯುವುದಿಲ್ಲ ಎಂದು ಹೇಳಿದ್ದಾರೆ.





# ನ್ಯಾಯನಿಷ್ಠುರಿ ಮಡಿವಾಳ ಮಾಚಯ್ಯ

-ಎಚ್.ಎಸ್. ಸಿದ್ಧಗಂಗಪ್ಪ *

**ಹ**ನ್ನೆರಡನೆಯ ಶತಮಾನದ ಪ್ರಮುಖ ಶರಣರಲ್ಲಿ ಮಡಿವಾಳ ಮಾಚಯ್ಯನೂ ಒಬ್ಬ. ಅನ್ಯಾಯದ ವಿರುದ್ಧ ಸಿಡಿದೇಳುವ ಗುಣವನ್ನು ಮೈಗೂಡಿಸಿಕೊಂಡಿದ್ದ ಮಾಚಯ್ಯ, ಒಬ್ಬ ಅಪ್ರತಿಮ ವೀರ. ಅವನ ಸತ್ಯ ಶುದ್ಧ ಕಾಯಕ ಕಲ್ಯಾಣದಲ್ಲಿ ಮನೆ ಮಾತಾಗಿತ್ತು. ಕಲ್ಯಾಣದಲ್ಲಿ ಶರಣರಿಗೆ ಗಣಾಚಾರದ ಗುಟ್ಟು ರಟ್ಟಾದುದು ಮಾಚಯ್ಯ ನಿಂದ. ಕಲ್ಯಾಣದಲ್ಲಿ ಪ್ರಭುದೇವರ ನೇತೃತ್ವದಲ್ಲಿ ನಡೆಯುತ್ತಿದ್ದ ಅನುಭವ ಮಂಟಪದಲ್ಲಿ ಮಡಿವಾಳ ಮಾಚಯ್ಯನ ತೀಕ್ಷ್ಣತೆಯಿಂದ ಕೂಡಿದ ಚಿಂತನೆಗಳು, ವಿಚಾರ ಮಂಡನೆ, ವಿಷಯ ಪ್ರತಿಪಾದನೆ ಅಲ್ಲಮಪ್ರಭು, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮೊದಲಾದ ಶರಣರು ತಲೆದೂಗುವಂತೆ ಮಾಡಿತ್ತು.

ಹುಟ್ಟಿದ್ದು ಕ್ರಿ.ಶ. ೧೧೧೬ರಲ್ಲಿ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಹಿಪ್ಪರಿಗೆ ಗ್ರಾಮ. ತಂದೆ ಪರ್ವತಯ್ಯ, ತಾಯಿಯಾರೆಂದು ತಿಳಿದು ಬಂದಿಲ್ಲ. ತಂದೆಯ ವೃತ್ತಿ ಬಟ್ಟೆಯನ್ನು ಮಡಿ ಮಾಡುವ ಕಾಯಕ. ದೀಕ್ಷಾ ಗುರು ಮಲ್ಲಿಕಾರ್ಜುನ. ತಂದೆಯ ಕಾಯಕದಲ್ಲಿ ಮಾಚಯ್ಯ ಸಹಾಯ ಮಾಡುತ್ತಿದ್ದ. ಅವರದು ಕಡು ಬಡತನದ ಕುಟುಂಬ. ಸತ್ಯ ಶುದ್ಧ ಕಾಯಕದಿಂದ ಬಂದ ಆದಾಯದಿಂದ ಜೀವನ ನಿರ್ವಹಣೆ. ಜನಪದರು ಮಾಚಯ್ಯನ ಮನೆಯ ಸ್ಥಿತಿಯನ್ನು ಅರ್ಥಪೂರ್ಣವಾಗಿ ಹೀಗೆ ಬಣ್ಣಿಸಿದ್ದಾರೆ.

*ಮಡಿವಾಳ ಮಾಚಣ್ಣ ಕಡುಭಕ್ತ ತಾನಾಗಿ*
*ಹಡೆದವರ ಕೆಲಸ ಕೈಕೊಂಡ -ಊರೊಳಗೆ*
*ಬಡವರಿಗೆ ಭಾಗ್ಯನಿಧಿಯಾದ*
*ಮನೆಗೆಲಸ ಮಡಿವಾಳ ದಿನಗೆಲಸ ಶಿವಭಕ್ತಿ*
*ಮನೆಬೆರೆವ ಲಿಂಗದೇಹದಲಿ -ಬಲು ಒಪ್ಪಿ*
*ಕನಕ ಜನಕಾಗಿ ಬಾಳುವೆಯು*

ಹೀಗೆ ಅಂತರ್ಮುಖದಲ್ಲಿ ಶಿವನ ಧ್ಯಾನ ಮಾಡುತ್ತಾ, ಬಾಹ್ಯದಲ್ಲಿ ಕಾಯಕ ಮಾಡುತ್ತಿದ್ದ ಮಡಿವಾಳ ಮಾಚಯ್ಯನ ಅಂತರಾತ್ಮ ಬೇರೆ ಕಡೆ ಸೆಳೆಯುತ್ತಿತ್ತು. ಆ ಸೆಳೆತ ಅಸಮಾನ್ಯ ವಾದುದು. ಕಲ್ಯಾಣದಲ್ಲಿ ಬಸವಣ್ಣನವರ ಕೀರ್ತಿಯನ್ನು ಕೇಳಿ ಅವರನ್ನು ಕಾಣುವ ತವಕ ದಿನೇ ದಿನೇ ಹೆಚ್ಚಾಗತೊಡಗಿತು.

***ಬಸವ ಬೋಧೆಯು ಬೆಳೆದು ವಸುಧೆಯಲಿ ಹಬ್ಬುತಲಿ***
***ಹಸುಗೂಸು ಕೇಳಿ ಕಿವಿಗೊಟ್ಟು ಚಣದೊಳಗೆ***
***ಹೊಸಮತವು ಉದಿಸಿ ಭೂ ಜನಕೆ***

ಬಸವಣ್ಣನವರ ದರ್ಶನ ಭಾಗ್ಯ ಪಡೆಯಲು ಮನಸ್ಸು ಹಾತೊರೆಯುತ್ತಿತ್ತು. ತಡ ಮಾಡಲಿಲ್ಲ. ಕೂಡಲೆ ಹಿಪ್ಪರಿಗೆ ಯನ್ನು ಬಿಟ್ಟು ಕಲ್ಯಾಣದ ಕಡೆಗೆ ಮುಖ ಮಾಡಿದ. ದಾರಿಯ ಮಧ್ಯೆ ಭೀಮಾನದಿ ತುಂಬಿ ಭೋರ್ಗರೆಯುತ್ತಾ ಹರಿಯುತ್ತಿತ್ತು. ಪ್ರವಾಹದ ವಿರುದ್ಧ ಧೈರ್ಯದಿಂದ ಈಜಿ ದಡ ಸೇರಿ ಕಲ್ಯಾಣದ ಮಹಾದ್ವಾರಕ್ಕೆ ಬಂದು ಭಕ್ತಿಯಿಂದ ನಮಿಸಿ ಕಲ್ಯಾಣವನ್ನು ಪ್ರವೇಶಿಸಿ ಬಸವಣ್ಣನವರ ದರ್ಶನ ಮಾಡಿ ಶರಣ ಸಮುದಾಯದಲ್ಲಿ ತಾನೂ ಒಬ್ಬನಾಗುತ್ತಾನೆ. ಅಲ್ಲಿ ಬಟ್ಟೆ ಮಡಿ ಮಾಡುವ ಕಾಯಕದಲ್ಲಿ ತನ್ನನ್ನು

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.

ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾನೆ.

*ನೂರೊಂದು ಸ್ಥಲಗಳಿಗೆ ನೂರೊಂದು ಶರಣರು*
*ವೀರ ಮಾಚಣ್ಣ ಕರವಾಳು – ಬಸವನಿಗೆ*
*ಧೀರ ಕಾಯಕದ ಹುರಿಯಾಳು*

ಕಾಯಕ ನಿಷ್ಠೆ, ನೇರ ಮಾತು, ಧೀರ ನಡೆ ಇವುಗಳಿಂದ ಬಸವಾದಿ ಶರಣರ ಮೆಚ್ಚುಗೆಗೆ ಪಾತ್ರನಾಗುತ್ತಾನೆ. ಎಲ್ಲರ ಬಾಯಲ್ಲೂ ಮಾಚಯ್ಯನ ವ್ಯಕ್ತಿತ್ವದ ಗುಣಗಾನ ಕೇಳಿ ಬರುತ್ತದೆ.

ಬಸವಣ್ಣನವರು ಮಡಿವಾಳ ಮಾಚಯ್ಯನನ್ನು ಕುರಿತು ಹೇಳಿರುವ ಮಾತುಗಳು ಅವನ ವ್ಯಕ್ತಿತ್ವಕ್ಕೆ ಮೆರುಗು ನೀಡುತ್ತದೆ.

*'ಎನ್ನ ಕಾಯಕದ ಶುದ್ಧವ ಮಾಡಿದಾತ ಮಡಿವಾಳ*
*ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ*
*ಎನ್ನಂತರಂಗವ ಬೆಳಗಿದಾತ ಮಡಿವಾಳ*
*ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ*
*ಕೂಡಲಸಂಗಮದೇವಾ ಎನ್ನ ನಿಮಗೆ ಯೋಗ್ಯವ*
*ಮಾಡಿದಾತ ಮಡಿವಾಳ'*

ಎಂದು ಬಸವಣ್ಣನವರು ಹೇಳಿದರೆ ; ಚೆನ್ನಬಸವಣ್ಣ **'ಅಘಟಿತ ಘಟಿತವೆಂಬ ಮಹಾಘನವ ಸಾಧಿಸುವರೆ! ಮಡಿವಾಳನ ಕೃಪೆಯಿಲ್ಲದನ್ನಕ್ಕರ ಎಂತರಿಯ ಬಪ್ಪುದು ನಿಜಲಿಂಗೈಕ್ಯವನು !'** ಎಂದು ಪ್ರಶಂಸಿಸುತ್ತಾರೆ.

ಮಡಿವಾಳ ಮಾಚಯ್ಯ ವಿನಯ ಸಂಪನ್ನ, ನಿರಹಂಕಾರ ಅವನಲ್ಲಿ ಮನೆಮಾಡಿಕೊಂಡಿತ್ತು. ಅವನು **'ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರ, ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರ'** ವೆಂಬ ನಾಣ್ಣುಡಿಯಂತೆ ವಿನೀತ ಭಾವದಿಂದ **'ಒಡಲೆ ಬಸವಣ್ಣ, ಪ್ರಾಣವೇ ಚೆನ್ನಬಸವಣ್ಣ, ಎನ್ನ ಮಹಾಜ್ಞಾನವೇ ನೀವೇ ನೋಡಾ'** ಎಂದು ಪ್ರಭುದೇವರಲ್ಲಿ ನಿವೇದಿಸಿಕೊಳ್ಳುತ್ತಾನೆ.

ಬಸವಣ್ಣನವರನ್ನು ಕುರಿತು

*'ಎತ್ತತ್ತ ನೋಡಿದಡತ್ತತ್ತ*
*ಬಸವನೆಂಬ ಬಳ್ಳಿ, ಎತ್ತಿ ನೋಡಿದಡೆ ಲಿಂಗವೆಂಬ*
*ಗೊಂಚಲು, ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯಾ'*

ಎಂದು ನಿವೇದಿಸಿಕೊಂಡಿದ್ದಾನೆ.

ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಈ ಮೂರು ಜನರನ್ನು ಮಾಚಯ್ಯ ತನ್ನ ಮಾರ್ಗದರ್ಶಕರೆಂದು ಕೊಂಡಾಡಿದ್ದಾನೆ. ಈ ಮೂರು ಜನ ಶರಣರು ಅವನ ಪಾಲಿಗೆ ತಂದೆ, ತಾಯಿ, ಗುರು, ಮಾರ್ಗದರ್ಶಕರು ಎಲ್ಲವೂ ಆಗಿದ್ದಾರೆ. ಈ ಮೂರು ಜನ ಮಹಾನುಭಾವರನ್ನು ಕುರಿತು

*'ಎನ್ನಂಗದಾಚಾರದಲ್ಲಿ ಸಂಗನ ಬಸವಣ್ಣನ ಕಂಡೆನು*
*ಎನ್ನ ಮನದ ಅರಿವಿನಲ್ಲಿ ಚೆನ್ನಬಸವಣ್ಣನ ಕಂಡೆನು*
*ಎನ್ನ ಭಾವದ ಕೊನೆಯ ಮೊನೆಯ ಮೇಲೆ*
*ಅಲ್ಲಮಪ್ರಭುದೇವರ ಕಂಡೆನು ಎಲೆ ಕಲಿದೇವಯ್ಯ,*
*ನಿಮ್ಮ ಶರಣರ ಘನವನು ಎಲ್ಲ ಸರ್ವಾಂಗದಲ್ಲಿ*
*ಕಂಡು ನಮೋ ನಮೋ ಎನುತಿರ್ದೆನಯ್ಯಾ'*

ಮಾಚಯ್ಯನ ಕಾಯಕ ವಿಶಿಷ್ಟವಾದುದು. ಸೂರ್ಯೋದಯಕ್ಕೆ ಮುನ್ನವೇ ಶರಣರು ಉಟ್ಟುಬಿಟ್ಟ ಬಟ್ಟೆಗಳನ್ನು ಮಡಿ ಮಾಡಿ ತಂದು ಕೊಡುವುದು ಅವನ ನಿತ್ಯ ಕಾಯಕವಾಗಿತ್ತು. ಬಟ್ಟೆಗಳನ್ನು ಗಂಟು ಕಟ್ಟಿಕೊಂಡು **'ಮಡಿವಾಳ ಗುಂಡ'**ಕ್ಕೆ ಹೋಗಿ ಮಾಡಿಮಾಡಿಕೊಂಡು ಬರುತ್ತಿದ್ದ. ಇಂದಿಗೂ ಆ 'ಮಡಿವಾಳ ಗುಂಡ' ಪರಮಪವಿತ್ರವೆಂದು ಜನಜನಿತವಾಗಿದೆ. ಬಟ್ಟೆಗಳನ್ನು ಮಡಿ ಮಾಡಿ ಬಿಸಿಲಿನಲ್ಲಿ ಒಣಗಿಸಿ ಗಳಿಗೆ ಮಾಡಿ ಗಂಟು ಕಟ್ಟಿಕೊಂಡು ಬರುವಾಗ ಬಟ್ಟೆ ಗಂಟನ್ನು ಭವಿಗಳು ಮುಟ್ಟಬಾರದೆಂದು **'ವೀರಘಂಟೆ'** ಬಾರಿಸುತ್ತಾ ಬಸವಣ್ಣನವರ ಅರಮನೆಗೆ ಬರುತ್ತಿದ್ದ. ಆ ಸಂದರ್ಭವನ್ನು ಕವಿ ತುಂಬಾ ಸಹಜವಾಗಿ ಚಿತ್ರಿಸಿದ್ದಾನೆ.

*'ಜಡರುಗಳಿದಾ ತೊಲಗಿ ಭೋ ಎನು*
*ತಡಿಗಡಿಗೆ ಜಯಘಂಟೆಯನು ಹೊಯಿ*
*ದೆಡೆಗೆಡೆಗೆ ಸಾರುತ್ತ ಶರಣನು ಮಠಕೆ ನಡೆತಂದು*
*ಮಡಿಗಳು ಮೃದುವಾಗಿ ಘಟ್ಟಿಸಿ*
*ಮಡಿಯ ಒಡೆಯರು ಬಂದು ಬೇಡಲು*
*ಕೊಡುವೆನೆಂತಹ ವಸ್ತುವಾದೊಡು ನಮಿಸಿ ಮಾಚಯ್ಯ*

ಮಡಿವಾಳ ಮಾಚಯ್ಯನ ಕಾಯಕ ನಿಷ್ಠೆಯನ್ನು ಕಂಡು ಕೆಲವು ಕುಹಕಿಗಳು ನಿಂದಿಸುತ್ತಿದ್ದರಲ್ಲದೆ ಹೊಟ್ಟೆಕಿಚ್ಚು ಪಡುತ್ತಿದ್ದರು. ಕುಹಕಿಗಳಲ್ಲಿ ಒಬ್ಬ ಮಾಚಯ್ಯನನ್ನು ಕೆಣಕಲು ಹೋಗಿ ಸಾವಿನ ಉಡಿಯಲ್ಲಿ ಬೀಳುತ್ತಾನೆ. ದೊರೆ ಬಿಜ್ಜಳನಿಗೆ ಈ ವಿಚಾರ ತಿಳಿದು ಉಗ್ರನಾಗುತ್ತಾನೆ. ಅಗಸನಿಗೆ ಇಷ್ಟು





ಅಹಂಕಾರವೇ ಎಂದು ಗರ್ಜಿಸುತ್ತಾನೆ. ಅರಸನ ಕೋಪ ಬಸವಣ್ಣನವರಿಗೂ ಮುಟ್ಟುತ್ತದೆ. ಬಸವಣ್ಣನವರು ಪರಿಪರಿಯಾಗಿ ಹೇಳಿದರೂ ಬಿಜ್ಜಳನು ಕೇಳುವುದಿಲ್ಲ. 'ಬಸವನಾಡಿದ ಮಾತ ಕಸಕ್ಕಿಂತ ಕಡೆಮಾಡಿ' ಮಾಚಯ್ಯನನ್ನು ಆನೆಯಿಂದ ತುಳಿಸಲು ಜಟ್ಟಿಗಳನ್ನು ಕಳುಹಿಸುತ್ತಾನೆ. ಆ ಸನ್ನಿವೇಶವನ್ನು ಜನಪದ ಕವಿಗಳು ಅರ್ಥಪೂರ್ಣವಾಗಿ ಅಭಿವ್ಯಕ್ತಿಪಡಿಸಿದ್ದಾರೆ.

*ಮರುದಿನವೆ ನಸುಕರಿದು ಹರಿಸಿದನು ದಿನದೊಡೆಯ*
*ಶರಣ ಮಾಚನಿಗೆ ಬಲು ಬೆಳಕ–ಕಾಯಕದ*
*ಕಿರಣ ಬೆಳೆಗೆಂದು ಜಗಕ್ಕೆಲ್ಲ*

ಜಟ್ಟಿಗಳೂ ಪಟ್ಟದಾನೆಯೂ ಮಡಿವಾಳ ಮಾಚಿದೇವನ ದಿವ್ಯಶಕ್ತಿಗೆ ಆಹುತಿಯಾಗುತ್ತವೆ. ಬಿಜ್ಜಳನಿಗೆ ಈ ವಿಷಯ ತಿಳಿದು ತಾನು ದುಡುಕು ಮಾಡಿದ ತಪ್ಪಿನ ಅರಿವಾಗುತ್ತದೆ. ತಡಮಾಡಿದರೆ ಮತ್ತೆ ಏನು ಅನಾಹುತವಾಗುತ್ತದೆಯೋ ಎಂದು ಹೆದರಿ ಮಾಚಯ್ಯನಲ್ಲಿ ಕ್ಷಮೆ ಕೋರುತ್ತಾನೆ. **'ಕ್ಷಮಾ ವೀರಸ್ಯ ಭೂಷಣಂ'** ಎಂಬಂತೆ ಮಾಚಯ್ಯ ಕ್ಷಮಿಸುತ್ತಾನೆ ಅಷ್ಟೇ ಅಲ್ಲ ಸತ್ತ ಆನೆ, ಮಾವುತ ಹಾಗೂ ಜಟ್ಟಿಗಳನ್ನು ಬದುಕಿಸುವ ಪವಾಡ ತೋರುತ್ತಾನೆ.

**ನುಲಿಯ ಚಂದಯ್ಯನ ಪ್ರಸಂಗ :**

ಒಮ್ಮೆ ನುಲಿಯ ಚಂದಯ್ಯ ಕೆರೆಯಲ್ಲಿ ಹುಲ್ಲನ್ನು ತೊಳೆಯುತ್ತಿರುವಾಗ ಅವನ ಇಷ್ಟಲಿಂಗ ಜಾರಿ ಕೆರೆಯಲ್ಲಿ ಬೀಳುತ್ತದೆ. ಇದನ್ನು ಗಮನಿಸಿದ ಚಂದಯ್ಯ ತಾವಾಗಿಯೇ ಬಿದ್ದು ಹೋದ ಲಿಂಗವನ್ನು ಮತ್ತೇಕೆ ಧರಿಸಬೇಕು. ಇಷ್ಟಲಿಂಗವನ್ನು ಬಿಟ್ಟು ಭಾವಲಿಂಗವನ್ನು ಪೂಜಿಸುತ್ತೇನೆ ಎಂದು ಹೇಳುತ್ತಾನೆ. ಇಷ್ಟಲಿಂಗ ತನ್ನನ್ನು ಎದೆಯ ಮೇಲೆ ಧರಿಸುವಂತೆ ಪರಿಪರಿಯಾಗಿ ಪ್ರಾರ್ಥಿಸಿದರೂ ಪ್ರಾರ್ಥನೆಯನ್ನು ನಿರಾಕರಿಸುತ್ತಾನೆ. ಮಡಿವಾಳ ಮಾಚಯ್ಯನಿಗೆ ವಿಷಯ ಗೊತ್ತಾಗಿ ಚಂದಯ್ಯನಲ್ಲಿಗೆ ಬರುತ್ತಾನೆ. ಅವನಿಗೆ ಇಷ್ಟಲಿಂಗದ ಮಹತ್ವವನ್ನು ಹೀಗೆ ಪರಿಚಯ ಮಾಡಿಕೊಡುತ್ತಾನೆ.

*ಸವಿ ಸಾಕು ಹಣ್ಣು ಬೇಡವೆನ್ನಬಹುದೆ !*
*ಹಣ್ಣು ಇದ್ದರಲ್ಲವೆ ಸವಿ*
*ಇಷ್ಟಲಿಂಗ ಬೇಡ, ಭಾವಲಿಂಗ ಬೇಕೆಂಬುದು ಭ್ರಮೆ*
*ಅರಿವನರಿದಹೆನೆಂದು ಕ್ರಿಯೆಯ ಬಿಡಬಹುದೆ ;*
*ಕಿಚ್ಚುವ ತಗಣೆಗಾಗಿ ಮನೆಯ ಸುಟ್ಟವರುಂಟೆ ?*
*ಗುರುಪೂಜೆಯನರಿದೆನೆಂದು ಲಿಂಗಪೂಜೆಯ ಬಿಡಲಾಗದು*
*ಲಿಂಗಪೂಜೆಯನರಿದೆನೆಂದು ಜಂಗಮಪೂಜೆಯ ಬಿಡಲಾಗದು*
*ಜಂಗಮಪೂಜೆಯನರಿದೆನೆಂದು ಶರಣರಸಂಗವ ಬಿಡಲಾಗದು*
*ಇದು ಕಾರಣ ಶರಣರ ಸಂಗದ ಸಮ್ಮನದಲ್ಲಲ್ಲದೆ*
*ಕಲಿದೇವಯ್ಯನ ಕೂಡುವ ಕೂಟವ ಕಾಣಬಾರದು*
*ಹೋಹ ಬಾರ ಚಂದಯ್ಯ'*

ಎಂದು ಹೇಳಿ ಚಂದಯ್ಯನನ್ನು ಅನುಭವಮಂಟಪಕ್ಕೆ ಕರೆದು ತರುತ್ತಾನೆ. ಅಲ್ಲಿ ಚಂದಯ್ಯ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಇಷ್ಟಲಿಂಗವನ್ನು ಮತ್ತೆ ಧರಿಸುತ್ತಾನೆ.

ಮಾಚಯ್ಯನ ವ್ಯಕ್ತಿತ್ವ ಪ್ರಕಾಶವಾಗುವ ಮತ್ತೊಂದು ಘಟನೆ ನಡೆಯುತ್ತದೆ. ಒಮ್ಮೆ ಬಸವಣ್ಣನವರಿಂದ **'ಬೇಡುವರಿಲ್ಲದೆ ಬಡವನಾದೆ'**ನೆಂಬ ಉದ್ಗಾರ ಹೊರಡುತ್ತದೆ. ಈ ವಿಷಯ ಭಕ್ತನಿಂದ ಮಾಚಯ್ಯನಿಗೆ ತಿಳಿಯುತ್ತದೆ. ಭಕ್ತನು ಹೇಳಿದ ಮಾತನ್ನು ಕೇಳಿ ಮಡಿವಾಳ ಮಾಚಯ್ಯ ಖಿನ್ನನಾಗುತ್ತಾನೆ. ತನ್ನ ಎರಡು ಕಿವಿಗಳನ್ನು ಮುಚ್ಚಿಕೊಂಡು 'ಬಸವಣ್ಣನವರಿಗೂ ಇಂಥ ಭ್ರಮೆ ಬರಬೇಕೇ? ಶಿವ ಶಿವಾ' ಎಂದು ನೊಂದು ನುಡಿಯುತ್ತಾನೆ. ಈ ವಿಚಾರವನ್ನು ಕೇಳಿ ಬಸವಣ್ಣನವರು ಮಾಚಯ್ಯನಲ್ಲಿಗೆ ಬಂದು ಕ್ಷಮೆ ಕೋರುತ್ತಾರೆ. ಆಗ ಮಡಿವಾಳ ಮಾಚಯ್ಯ ಬಸವಣ್ಣನವರೆ ಉಳಿದ ಭಕ್ತರೆಲ್ಲ ಬೇಡುವುದಕ್ಕೆ ಹುಟ್ಟಿದ ಬಡ ಬಿಕನಾಸಿಗಳು ನೀವು ಕೊಡುವುದಕ್ಕಾಗಿಯೇ ಹುಟ್ಟಿದ ಶ್ರೀಮಂತ ಮಹಾದಾನಿಗಳಲ್ಲವೆ? ಎಂದು ಕಟಕಿ ನುಡಿ ಯುತ್ತಾನೆ. ಆಗ ಬಸವಣ್ಣನವರು ತಾನು ಮಾಡಿದ ತಪ್ಪಿನ ಅರಿವಾಗಿ ಪಶ್ಚಾತ್ತಾಪದಲ್ಲಿ ಬೆಂದು ನೊಂದು ಅತ್ಯಂತ ವಿನೀತಭಾವದಿಂದ ನಾನು **'ಮರವೆಯ ಮರಳು, ನೀವು ಅರಿವಿನ ತಿರುಳು. ನಾನು ರಂಜಕ, ನೀವು ನಿರಂಜನರು, ನಾನು ಮರೆವೆಯಿಂದ ತಪ್ಪಿದ್ದನ್ನು ನೀವು ಅರಿವಿನಿಂದ ತಿದ್ದಬೇಕು'** ಎಂದು ಬೇಡಿಕೊಳ್ಳುತ್ತಾರೆ. ಆಗ ಮಾಚಯ್ಯ ಸಮಾಧಾನಿಯಾಗಿ **'ವಿನಯ, ಶಾಂತಿ, ಸತ್ಯ, ಸ್ಥಿರಬುದ್ಧಿ, ಇಂದ್ರಿಯ ನಿಗ್ರಹ, ನಿರ್ವಂಚನೆ, ನಿರಹಂಕಾರ, ಕೈಂಕರ್ಯ, ಭೀತಿ, ಅನುಸರಣೆಗಳೇ ಭಕ್ತಿಯ ಕುರುಹುಗಳೆಂದು ಭಕ್ತಿಯ ರಹಸ್ಯವನ್ನು** ತಿಳಿಸಿ ಬಸವಣ್ಣನವರನ್ನು ಸಮಾಧಾನ

ಪಡಿಸುತ್ತಾನೆ. ಅಷ್ಟೇ ಅಲ್ಲ. 'ಅಗಸಮುನಿಯುವುದು ಮಲಿನಕ್ಕೆ, ವಸ್ತ್ರಕಲ್ಲ, ಶರಣ ಮುನಿಯುವುದು ಅವಗುಣಕ್ಕೆ, ಶಿವಭಕ್ತಗಲ್ಲ, ತಾನೆಂಬುದನ್ನು ಮರೆತುಬಿಡಿರಿ ನಿಮ್ಮ ಭಕ್ತಿ ಪುಟವಿಟ್ಟ ಚಿನ್ನದಂತೆ ನಿಮ್ಮ ಭಕ್ತಿ ಇನ್ನಷ್ಟು ಥಳಥಳಿಸುತ್ತದೆ, ಎಂದು ಸಂತಯಿಸುತ್ತಾನೆ.

ಮಡಿವಾಳ ಮಾಚಯ್ಯ ತನ್ನ ಶುದ್ಧ ಕಾಯಕದಿಂದ ನಿರ್ಮಲವಾದ ವ್ಯಕ್ತಿತ್ವದಿಂದ ಬಸವಾದಿ ಶರಣರ ಅಂತರಂಗವನ್ನು ಗೆದ್ದ ಮಹಾಮಹಿಮ. ಬಸವಾದಿ ಶರಣರಿಗೂ ಅಷ್ಟೇ; ಮಡಿವಾಳ ಮಾಚಯ್ಯನ ಬಗ್ಗೆ ಅಪಾರವಾದ ಅಭಿಮಾನ. ಪ್ರೀತಿ, ವಿಶ್ವಾಸ.

ವೈರಾಗ್ಯನಿಧಿ ಅಲ್ಲಮಪ್ರಭು ತನ್ನ ವಚನವೊಂದರಲ್ಲಿ ಮಡಿವಾಳ ಮಾಚಯ್ಯನ ವ್ಯಕ್ತಿತ್ವವನ್ನು ಹೀಗೆ ಬಣ್ಣಿಸಿದ್ದಾರೆ.

*'ಸುಜ್ಞಾನ ಪ್ರಭೆಯ ಹಾಸಿ ಮಹಾಜ್ಞಾನದಲ್ಲಿ*
*ನಿರ್ಭಾವ ಸಂಪನ್ನನಾದ ಮಡಿವಾಳನ ನುಡಿಯ*
*ಪ್ರಸಾದವ ನಾನು ಹೊದೆದ ಕಾರಣ*
*ನಿರ್ಮಳನಾದೆನು, ನಿಜೈಕ್ಯನಾದೆನು, ನಿಶ್ಚಿಂತನಾದೆನು*
*ಮಡಿವಾಳನ ಕೃಪೆಯಿಂದ*
*ನಾನು ಬದುಕಿದೆನು ಕಾಣಾ ಗುಹೇಶ್ವರಾ'*

ಅವರ ಒಂದೊಂದು ಮಾತುಗಳು ಮಾಚಯ್ಯನ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ.

ಕಲ್ಯಾಣದ ಶರಣ ಸಮೂಹದಲ್ಲಿ ಮಡಿವಾಳ ಮಾಚಯ್ಯನಿಗೆ ವಿಶಿಷ್ಟ ಸ್ಥಾನವಿತ್ತು. ಕಾಯಕನಿಷ್ಠೆ, ಪ್ರಾಮಾಣಿಕತೆ, ನೇರ ನುಡಿ, ಅನ್ಯಾಯ ವಿರುದ್ಧ ಸೆಟೆದು ನಿಲ್ಲುವ ಶೌರ್ಯ, ಪ್ರಖರವಾದ ಚಿಂತನೆ, ವಿಷಯ ಮಂಡನೆ ಇವುಗಳಿಂದ ಶರಣ ಮಾಚಯ್ಯ ಎಲ್ಲರ ಪ್ರೀತಿ ಆದರಗಳಿಗೆ ಪಾತ್ರನಾಗಿದ್ದ. ತನ್ನ ಚಿಂತನೆಗಳನ್ನು ಅನುಭವಗಳನ್ನು **'ಕಲಿದೇವರ ದೇವಾ'** ವಚನಾಂಕಿತದ ಮೂಲಕ ಅಭಿವ್ಯಕ್ತಪಡಿಸಿದ್ದಾನೆ. ಈವರೆಗೆ ಅವನ ನಾಲ್ಕುನೂರ ಐವತ್ತು ವಚನಗಳು ದೊರೆತಿದ್ದು ಒಂದೊಂದು ವಚನವೂ ಮನುಕುಲಕ್ಕೆ ಅರ್ಥಪೂರ್ಣವಾದ ಸಂದೇಶವನ್ನು ನೀಡುತ್ತವೆ.

*'ವಾಯುಗುಣವ ಸರ್ಪ ಬಲ್ಲುದು ;*
*ಮಧುರಗುಣವನಿರುವೆ ಬಲ್ಲುದು;*
*ಗೋತ್ರವ ಗುಣವ ಕಾಗೆ ಬಲ್ಲುದು ;*
*ಇದುಕಾರಣ ಮನುಷ್ಯ ಜನ್ಮದಲ್ಲಿ ಬಂದು*
*ಶಿವಜ್ಞಾನವನರಿಯದಿದ್ದರೆ*
*ಆ ಕಾಗೆ ಕೋಳಿಗಳಿಗಿಂತ ಕರಕಷ್ಟ ಕಾಣಾ*
*ಕಲಿದೇವರ ದೇವಾ'*

'ಶಿವಭಕ್ತನಾಗಿ ಹುಟ್ಟಿ ಭಕ್ತಿ ಪಕ್ವವಿಲ್ಲದಿದ್ದಲ್ಲಿ ಕಾಗೆ ಕೋಳಿಗಳಿಗಿಂತ ಕರಕಷ್ಟ ಕಾಣಾ ಕೂಡಲಸಂಗಮದೇವಾ' ಎಂದರು ಬಸವಣ್ಣನವರು. 'ಶಿವಜ್ಞಾನಪಡೆಯದಿದ್ದರೆ ಕಾಗೆ ಕೋಳಿಗಳಿಗಿಂತ ಕರಕಷ್ಟ ಕಾಣಾ ಕಲಿದೇವರದೇವಾ' ಎಂದನು ಮಡಿವಾಳ ಮಾಚಯ್ಯ. ಇವರಿಬ್ಬರದೂ ಒಂದೇ ದೃಷ್ಟಿಕೋನ. ಇಬ್ಬರದು ಒಂದೇ ಚಿಂತನೆ. ಎಲ್ಲಾ ಕಾಲಕ್ಕೂ ಅನ್ವಯವಾಗುವಂತಹ ದಿವ್ಯಸಂದೇಶ.

ಕಲ್ಯಾಣದ ಕ್ರಾಂತಿಯ ಸಂದರ್ಭದಲ್ಲಿ ಮಾಚಯ್ಯನವರು ವಹಿಸಿದ ಪಾತ್ರ ಮಹತ್ತರವಾದುದು. ಬಿಜ್ಜಳನ ಕಡೆಯವರಿಂದ ಶರಣರಿಗೆ ಗಂಡಾಂತರ ಬಂದಾಗ ಅವರ ಬೆನ್ನಿಗೆ ಭೀಮರಕ್ಷೆಯಾಗಿ ನಿಂತು ಬೆನ್ನಟ್ಟಿ ಬಂದ ಬಿಜ್ಜಳನ ಸೇನೆಯನ್ನು ವೀರಾವೇಶದಿಂದ ಹೋರಾಡಿ ಹಿಮ್ಮೆಟ್ಟಿಸುತ್ತಾನೆ. ಮಾಚಯ್ಯನ ಕಲಿತನದ ಮುಂದೆ ಶರಣರಿಗೆ ಎದುರಾದ ವಿಪತ್ತು ಪರಿಹಾರವಾಗುತ್ತದೆ. ಉಳುವಿಯಲ್ಲಿ ಮತ್ತೆ ಶರಣರ ಕಾಯಕ ಚಟುವಟಿಕೆಗಳು ಪ್ರಾರಂಭವಾಗುತ್ತದೆ. ಆದರೆ ಮಾಚಯ್ಯ ಭೂಲೋಕಕ್ಕೆ ತಾನು ಬಂದ ಕರ್ತವ್ಯ ಮುಗಿಯಿತು ಎಂಬಂತೆ ಹಿಪ್ಪರಿಗೆಯ ಗವಿಯಲ್ಲಿ ಲಿಂಗದಲ್ಲಿ ಬಯಲಾಗುತ್ತಾನೆ. ❋

> ಕಾಯಕದ ಕರಸ್ಥಲದಲ್ಲಿ ಗುರುಸ್ವಾಯತವ
> ಮಾಡಿದೆನು. ಕ್ರೋಧದ ಕಾರ್ಯದಲ್ಲಿ ಜಂಗಮ
> ಸ್ವಾಯತವ ಮಾಡಿದೆನು. ಲೋಭವಿಲ್ಲದ
> ಪ್ರಸಾದವ ಗ್ರಹಿಸಿದೆನು. ಇಂತಿ ತ್ರಿವಿಧದಲ್ಲಿ
> ಶುದ್ಧನಾದೆನು ಕಾಣಾ ಕಲಿದೇವರ ದೇವಾ !
>
> * * *
>
> ಆಕಾರ ನಿರಾಕಾರವೆನುತಿಹರೆಲ್ಲರು ಆಕಾರವೆನ್ನ
> ನಿರಾಕಾರವೆನ್ನಲಿಂಗ ಜಂಗಮ ಪ್ರಸಾದ
> ತದ್ಗತನಾದ ನಿಮ್ಮ ಬಸವಣ್ಣನಿಂತಹ ಸ್ವತಂತ್ರನಯ್ಯ
> ಕಲಿದೇವರ ದೇವಾ. !
>
> –ಮಡಿವಾಳ ಮಾಚಿದೇವ





## ಗುರು ಶಿಷ್ಯಂಗೆ ವಂದಿಸಿ ಕಲಿಸಿದರೆ.....

–ಡಾ॥ ಆರ್. ನಾಗರಾಜಯ್ಯ*

*ಭಾರತೀಯ ಸಂಸ್ಕೃತಿಯ ಪ್ರಾರ್ಥನೆ*
*ಗುರುಬ್ರಹ್ಮ ಗುರುವಿಷ್ಣು ಗುರುದೇವೋ ಮಹೇಶ್ವರ*
*ಗುರುಸಾಕ್ಷಾತ್ ಪರಬ್ರಹ್ಮ*
*ತಸ್ಮೈಶ್ರೀ ಗುರುವೇ ನಮಃ ॥*

ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವ. ಈ ಮೇಲಿನ ಪ್ರಾರ್ಥನೆ ಮತ್ತು ನುಡಿಮುತ್ತುಗಳನ್ನು ವಿಶ್ಲೇಷಿಸಿದಾಗ ಗುರುವಿನ ಸ್ಥಾನ ಆಕಾಶದಷ್ಟು ಎತ್ತರವಾದದ್ದು ಎಂಬ ಅರಿವಾಗುತ್ತದೆ. ಶ್ಲೋಕದ ಅರ್ಥದ ಪ್ರಕಾರ ಗುರುವು ಸೃಷ್ಟಿ, ಸ್ಥಿತಿ ಮತ್ತು ಲಯಕರ್ತ ಎಂದು ಹೋಲಿಸಲಾಗಿದೆ. ನಮ್ಮ ರಾಷ್ಟ್ರದ ಪರಂಪರೆಯಲ್ಲಿ, ತಂದೆ–ತಾಯಿಗಳ ನಂತರದ ಮಹತ್ವದ ಸ್ಥಾನ ಗುರುವಿಗೆ, ಪ್ರಾಚೀನ ಸಾಂಸ್ಕೃತಿಕ ದೃಷ್ಟಿಯಿಂದ ಗಮನಿಸಿದರೆ ಗುರು ಒಂದು ವಿಶಿಷ್ಟವಾದ, ಪ್ರಬಲವಾದ, ಸಂವೇದನಾತ್ಮಕವಾದ ಶಕ್ತಿ ಎಂದು ಗೋಚರವಾಗುತ್ತದೆ. ಗುರುವಿನ ಸ್ಥಾನದ, ಮಹತ್ವದ ವರ್ಣನೆ ವೇದೋಪನಿಷತ್ತುಗಳಲ್ಲಿ ಮಾತ್ರ ಆಗಿಲ್ಲ. ಅನೇಕ ಮಹನೀಯರು, ಚಿಂತಕರು, ಚಕ್ರವರ್ತಿಗಳು, ತಜ್ಞರು ಗುರುವಿನ ಶಕ್ತಿಯನ್ನು ಮಹತ್ವವನ್ನು ತಮ್ಮದೇ ಆದ ರೀತಿಯಲ್ಲಿ ವರ್ಣಿಸಿದ್ದಾರೆ.

ಗ್ರೀಕ್ ದೇಶದ ದೊರೆ ಅಲೆಕ್ಸಾಂಡರ್, ನನಗೆ ಜನ್ಮ ನೀಡಿದ್ದಕ್ಕಾಗಿ ನನ್ನ ತಂದೆಗೆ ಋಣಿಯಾಗಿದ್ದೇನೆ, ಆದರೆ ನನ್ನ ಜೀವನವನ್ನು ರೂಪಿಸಿದವರು ಗುರುವಾದ್ದರಿಂದ ಜೀವನದಲ್ಲಿ ಗುರುವಿಗೆ ಋಣಿಯಾಗಿದ್ದೇನೆ ಎಂದಿದ್ದಾರೆ. ಹುಮಾಯೂನ್, ಕಬೀರ್, ದೇವರು ಮತ್ತು ಗುರು ಇಬ್ಬರು ನನ್ನ ಮುಂದೆ ಪ್ರತ್ಯಕ್ಷರಾದಾಗ ನಾನು ಪ್ರಥಮವಾಗಿ ಗುರುವಿಗೆ ನಮಿಸಿ ನಂತರ ದೇವರಿಗೆ ನಮಿಸುತ್ತೇನೆ ಎಂದಿದ್ದಾರೆ. ದೇವರ ದರ್ಶನ ಸಿಗುವುದು ಗುರುವಿನ ದರ್ಶನದ ನಂತರ ಎಂದು ಕಬೀರರ ಅಭಿಪ್ರಾಯ.

ವಿಶ್ವದ ಅತಿ ಶ್ರೇಷ್ಠವಾದ ಗುರುವಾದ ಗೌತಮ ಬುದ್ಧನ ಪ್ರಕಾರ, ಗುರುವಿನ ಸ್ಥಾನ ಸೇವೆ ಮಾತ್ರವಲ್ಲ ಸಾಮರ್ಥ್ಯ ಉಳ್ಳದಾಗಿದೆಯಂತೆ. ಗುರುವಿನ ನಡೆ–ನುಡಿ ಆಚಾರ ವಿಚಾರಗಳು, ಸೇವಾ ಮನೋಭಾವ ಮತ್ತು ನಿಸ್ವಾರ್ಥರಿಂದ ಕೂಡಿರಬೇಕು. ಪ್ರಸಿದ್ಧ ಇತಿಹಾಸಕಾರ ಎಚ್.ಜಿ.ವೇಲ್ಸ್ ಪ್ರಕಾರ ನೈಜವಾದ ಇತಿಹಾಸದ ನಿರ್ಮಾಪಕ ಗುರುವಾಗಿದ್ದಾನೆ. ಸುಪ್ರಸಿದ್ಧ ಶಿಕ್ಷಣ ತಜ್ಞ ಹೆನ್ರಿ ಆಡಮ್ಸ್ ಪ್ರಕಾರ ತಂದೆ–ತಾಯಿಗಳು ಜನ್ಮ ನೀಡುತ್ತಾರೆ. ಒಬ್ಬ ಕೊಲೆಗಡುಕನಾದವನು ಪ್ರಾಣ ತೆಗೆದುಕೊಳ್ಳುತ್ತಾನೆ. ಆದರೆ ಒಬ್ಬ ಆದರ್ಶ ಗುರು ವ್ಯಕ್ತಿಯ ಮೇಲೆ ಬೀರುವ ಪ್ರಭಾವಕ್ಕೆ ಆದಿಯಿದೆ. ಅಂತ್ಯವಿಲ್ಲ. ಇದು ನಿಶ್ಶಬ್ದವಾದ, ನಿರಂತರವಾದ, ಅಗೋಚರವಾದ ಮತ್ತು ಊಹೆಗೆ ನಿಲುಕದ ಕ್ರಿಯೆ. ಕೊಠಾರಿ ಆಯೋಗದ ವರದಿಯಲ್ಲಿ, ಶಿಕ್ಷಕನನ್ನು ರಾಷ್ಟ್ರದ ಭವಿಷ್ಯದ ನಿರ್ಮಾಪಕ ಎಂದಿದ್ದಾರೆ. ರಾಷ್ಟ್ರೀಯ ಶಿಕ್ಷಣ ನೀತಿ(೧೯೮೬) ಪ್ರಕಾರ ಯಾವ ರಾಷ್ಟ್ರವೂ ಅದರ ಶಿಕ್ಷಕ ವರ್ಗಕ್ಕಿಂತ ಮೇಲೇರಲಾರದು ಎಂದು ಉಲ್ಲೇಖಿಸಲಾಗಿದೆ. ಆದ್ದರಿಂದ ಗುರುವನ್ನು ಮಾರ್ಗದರ್ಶಕ, ತತ್ವಜ್ಞಾನಿ, ಸ್ನೇಹಿತ, ಪ್ರಭಾವ ಬೀರಬಲ್ಲ ಶಕ್ತಿ, ಆದರ್ಶ ಮಾದರಿ, ಸೃಷ್ಟಿಕರ್ತ, ಕಲೆಗಾರ ಎಂದೆಲ್ಲಾ ವರ್ಣಿಸಲಾಗಿದೆ. ಆಧುನಿಕ ಭಾರತದ ವೀರ ಸನ್ಯಾಸಿ ಎನ್ನಿಸಿಕೊಂಡಿರುವ ಆಧ್ಯಾತ್ಮಿಕ ಗುರು ವಿವೇಕಾನಂದರು ಗುರುವನ್ನು ಒಂದು ವಿಶಿಷ್ಟ ಶಕ್ತಿ ಎಂದು ಬಣ್ಣಿಸಿದ್ದಾರೆ.

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಹಿಂದೆ ಗುರುಗಳು ಜ್ಞಾನಸಂಪತ್ತಿನ ಒಡೆಯರಾಗಿದ್ದರು. ಶ್ರದ್ಧೆ, ನಿಷ್ಠೆ, ಆಸಕ್ತಿಗಳಿಂದ ಕರ್ತವ್ಯ ನಿರ್ವಹಿಸುವ ವ್ಯಕ್ತಿತ್ವವನ್ನು ಹೊಂದಿದ್ದು, ಒಂದು ಆದರ್ಶ ಜನಾಂಗವನ್ನೇ ಸೃಷ್ಟಿಸಬಲ್ಲ ಸೃಜನಶೀಲರಾಗಿದ್ದರು, ತ್ಯಾಗಿಗಳಾಗಿದ್ದರು. ಜೊತೆಗೆ ವಿದ್ಯೆ ಸಾಧಕ ಸೊತ್ತೇ ಹೊರತು ಸೋಮಾರಿಗಳ ಸೊತ್ತಲ್ಲ ಎಂದು ಪ್ರಬಲವಾಗಿ ನಂಬಿದ್ದವರು. ನಿರಂತರವಾಗಿ

* ಪ್ರಾಧ್ಯಾಪಕರು, ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ, ಜಯನಗರ, ಬೆಂಗಳೂರು.

ಜ್ಞಾನಾರ್ಜನೆಗಾಗಿ ಹಾತೊರೆಯುತ್ತಿದ್ದವರು. ಜ್ಞಾನಾರ್ಜನೆಯ ಬೆಳಕನ್ನು ತಮ್ಮ ಶಿಷ್ಯಸ್ತೋಮಕ್ಕೆ ಚೆಲ್ಲುತ್ತಿದ್ದರು. **ಸಾಧಕಾ ವಿದ್ಯಾ-ಬಾಧಕಾ ದ್ರವ್ಯ** ಎನ್ನುವ ಗಾಧೆ ಮಾತಿನ ಅರ್ಥವನ್ನು ಜೀವನಕ್ಕೆ ಅಳವಡಿಸಿಕೊಂಡಿದ್ದವರು. ಅವರಿಗೆ ವೃತ್ತಿ ತರಬೇತಿಯನ್ನು ನೀಡಬಲ್ಲ ಯಾವುದೇ ವಿಶೇಷ ಶಿಕ್ಷಣ ಸಂಸ್ಥೆಗಳು ಅಂದು ಲಭ್ಯವಿರಲಿಲ್ಲ. ಆದರೂ ತಮ್ಮ ಸತ್ವ ಪೂರ್ಣವಾದ ಪಾಂಡಿತ್ಯವನ್ನು ತಮ್ಮ ಮುಂದಿನ ಪೀಳಿಗೆಗೆ ವರ್ಗಾಯಿಸುವಲ್ಲಿ, ಶ್ರದ್ಧೆ, ನಿಷ್ಠೆಗಳಿಂದ ಕಾರ್ಯತತ್ಪರ ರಾಗಿರುತ್ತಿದ್ದರು ಎಂಬುದು ಒಂದು ಐತಿಹ್ಯ. ಇಂದಿನ ಶಿಕ್ಷಕ ಸಮುದಾಯದ ಚಿತ್ರಣ ಹಿಂದಿನದಕ್ಕಿಂತ ಸಂಪೂರ್ಣ ವಾಗಿ ಭಿನ್ನವಾಗಿದೆ.

ಆಧುನಿಕ ಸಮಾಜ, ನಾಗರಿಕತೆಯ ಹೆಸರಿನಲ್ಲಿ ಯಾಂತ್ರಿಕ ಬದುಕನ್ನು ಮೈಗೂಡಿಸಿಕೊಂಡಿದೆ. ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಈ ಯಾಂತ್ರಿಕ ಬದುಕಿನ ವ್ಯಾಪ್ತಿ ಹರಡಿ, ಶಿಕ್ಷಣ ಕ್ಷೇತ್ರಕ್ಕೂ ವಿಸ್ತಾರವಾಗಿದೆ. ಇಂತಹ ಯಾಂತ್ರಿಕ- ಮಾಂತ್ರಿಕ ಸಮಾಜದಲ್ಲಿ ಶಿಕ್ಷಕ ವೃತ್ತಿಯನ್ನು ಜೀವನದ ಗುರಿಯಾಗಿ ಆಯ್ಕೆ ಮಾಡಿಕೊಳ್ಳುವವರ ಸಂಖ್ಯೆ ಅತಿ ವಿರಳ. ಒಂದು ಸಂಶೋಧನೆಯ ವರದಿ ಪ್ರಕಾರ ಅಂತಿಮ ಪದವಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ೧೦೦ ವಿದ್ಯಾರ್ಥಿಗಳಿಗೆ ಅಭಿರುಚಿ ಪರೀಕ್ಷೆಯ ಪ್ರಶ್ನಾವಳಿ ಯೊಂದನ್ನು ನೀಡಿ, ದತ್ತಾಂಶಗಳನ್ನು ಸಂಗ್ರಹ ಮಾಡಿದಾಗ ಕೇವಲ ೧೧ ವಿದ್ಯಾರ್ಥಿಗಳು ಮಾತ್ರ ತಾವು ಶಿಕ್ಷಕ ವೃತ್ತಿಯಲ್ಲಿ ತೊಡಗಬೇಕೆಂದು ತೀರ್ಮಾನಿಸಿದ್ದಾರೆ ಎಂಬ ಫಲಿತಾಂಶ ದೊರೆಯಿತು. ಇದಕ್ಕೆ ಕಾರಣಗಳೇನೇ ಇರಲಿ ಇಂದು ಶಿಕ್ಷಕ ವೃತ್ತಿಗೆ ಸ್ವಇಚ್ಛೆಯಿಂದ ಬರುವ ಮಂದಿ ಬಹಳ ಕಡಿಮೆ. ಶಿಕ್ಷಕರ ವೃತ್ತಿಯ ಆಯ್ಕೆಗೆ ಕೊನೆಯ ಆದ್ಯತೆ ನೀಡುವವರ ಸಂಖ್ಯೆ ಹೆಚ್ಚು. ಅದಕ್ಕೆ ಕಾರಣಗಳು ಅನೇಕ. ನಮ್ಮ ಸಾಮಾಜಿಕ, ಆರ್ಥಿಕ ಸ್ಥಿತಿಗಳು, ಬೌದ್ಧಿಕ ಬಡತನ, ವಿದ್ಯಾರ್ಥಿಗಳ ಅಶಿಸ್ತು, ಶಾಲಾ ಕಾಲೇಜುಗಳಲ್ಲಿ ದಾಖಲಾತಿ ನೀತಿ ಹೆಚ್ಚು ಅಂಕ ಗಳಿಸಿದವರು ಮಾತ್ರ ಉತ್ತಮ ಶಿಕ್ಷಕ ರಾಗಬಲ್ಲರು ಎಂಬ ಭ್ರಮೆ. ಈ ಎಲ್ಲಾ ಅಡೆತಡೆಗಳ ನಡುವೆಯೂ ಹಾಗೂ, ಹೀಗೂ ಶಿಕ್ಷಣ ಕಾಲೇಜುಗಳಿಗೆ ಸೇರಿದವರು ಒಂದು ಶೈಕ್ಷಣಿಕ ವರ್ಷವನ್ನು ಪೂರೈಸಿ ತರಬೇತಿ ತಂತ್ರದ ಪ್ರಮಾಣ ಪತ್ರವನ್ನು ಪಡೆದು ಶಿಕ್ಷಕ ಹುದ್ದೆಗೆ ಅರ್ಹತೆಯನ್ನು ಪಡೆದುಕೊಳ್ಳುತ್ತಾರೆ. ಆದರೆ, ಇವರೂ ಕೂಡ ವೃತ್ತಿಗೆ ಬೇಕಾದ ಸಂಯಮ, ಮಾನಸಿಕ ಸ್ಥೈರ್ಯ, ಬೌದ್ಧಿಕ ಶ್ರೀಮಂತಿಕೆ, ಕರ್ತವ್ಯ ನಿಷ್ಠೆ, ಕಾಳಜಿ, ವೃತ್ತಿಪರತೆ ಮತ್ತು ಸೇವಾ ಮನೋಭಾವಗಳ ಬಡತನದಿಂದ ಬಳಲುತ್ತಾ ಶಿಕ್ಷಕ ವೃತ್ತಿಯಲ್ಲಿ ಮುಂದುವರೆಯುತ್ತಾರೆ. ಬೇರೆ ಇನ್ನಾವು ದಾದರೂ ಉತ್ತಮ ಸಂಭಾವನೆ ಕೊಡುವ ಕೆಲಸ ಲಭ್ಯ ವಾದರೆ ಪಲಾಯನ ಮಾಡುತ್ತಾರೆ. ಶಿಕ್ಷಕರಾಗಿರುವವರು ಮೇಲಿನ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳ ಲಾಗದಿದ್ದರೂ, ಸಾರಸಾಗಟಾಗಿ ತಿರಸ್ಕರಿಸಲೂ ಸಾಧ್ಯವಿಲ್ಲ ಎಂಬುದು ಸತ್ಯಸಂಗತಿ.

ಇಂತಹ ಗಂಭೀರವಾದ ಸನ್ನಿವೇಶದ ಮಧ್ಯೆಯೂ ಶಿಕ್ಷಕರ ದಿನಾಚರಣೆ ಒಂದು ಆಶಾಕಿರಣವಿದ್ದಂತೆ. ಇದು ಯಾಂತ್ರಿಕವಾಗಿ ನಡೆದು ಬರುತ್ತಿದೆ. ನಮ್ಮ ಸಮಾಜ, ಸರ್ಕಾರ, ಸಾರ್ವಜನಿಕರು ಸ್ವಯಂ ಸೇವಾ ಸಂಸ್ಥೆಗಳು, ವಿದ್ಯಾರ್ಥಿ ವೃಂದ ವರ್ಷಕ್ಕೊಮ್ಮೆಯಾದರೂ ಗುರುಗಳನ್ನು ನೆನೆಪಿಸಿಕೊಳ್ಳುತ್ತಾರೆ ಎಂಬ ತೃಪ್ತಿ, ಶುಭಾಶಯಗಳನ್ನು ಕೋರುತ್ತಾರಲ್ಲಾ ಎಂದು ಶಿಕ್ಷಕ ಸಮುದಾಯ ಸಂತೋಷ ಪಟ್ಟು, ಸಮಾಧಾನ ಮಾಡಿಕೊಳ್ಳುವ ಪರಿಸ್ಥಿತಿ ಉದ್ಭವ ವಾಗಿದೆ.

**ಗುರುಪರಂಪರೆ :**

ಇವೆಲ್ಲದರ ಮಧ್ಯೆ, ಈ ನಮ್ಮ ನಾಡು, ಅನೇಕ ಮೇಧಾವಿ ಅಚಾರ್ಯರಿಗೆ, ಗುರುಗಳಿಗೆ, ಶಿಕ್ಷಕರಿಗೆ ಜನ್ಮ ನೀಡಿದೆ. ಅಂತಹ ಗುರು ಪರಂಪರೆಯನ್ನು, ಅವರ ಕಾರ್ಯ ಶೀಲತೆಯನ್ನು ಸಾಮಾಜಿಕ ಕಾಳಜಿಯನ್ನು ವರ್ಷಕ್ಕೊಮ್ಮೆ ಯಾದರೂ ಸಾರ್ವಜನಿಕರು, ಸರ್ಕಾರ ಸ್ಮರಿಸುತ್ತಾರೆ ಎಂಬ ನೆಮ್ಮದಿಯ ನಿಟ್ಟುಸಿರು ಬಿಡುವ ಭಾಗ್ಯ ನಮಗೆ ದೊರೆತಿರುವುದು ಹೆಮ್ಮೆಯ ವಿಷಯ. ಈ ಶಿಕ್ಷಕ ದಿನಾಚರಣೆ ಯಾರ ಸ್ಮರಣೆಯಲ್ಲಿ ಆಗುತ್ತಿದೆಯೋ ಅವರು (ಡಾ॥ ಎಸ್. ರಾಧಾಕೃಷ್ಣನ್) ಜನ್ಮತಃ ಶಿಕ್ಷಕರು, ಅವರ ಕ್ರಿಯಾಶೀಲ ಕಾರ್ಯಕ್ಕೆ ಇಡೀ ರಾಷ್ಟ್ರ ನಮಿಸಿ ಗೌರವಿಸುತ್ತದೆ. ಅವರ ಹೆಜ್ಜೆಯಲಿ ಹೆಜ್ಜೆ ಇಟ್ಟು, ಅವರ ಆದರ್ಶಗಳನ್ನು ತಮ್ಮದಾಗಿಸಿ





ಕೊಂಡು ವೃತ್ತಿಪರತೆ ಬೆಳೆಸಿಕೊಳ್ಳುವ ಶಿಕ್ಷಕರ ಸಂಖ್ಯೆ ಗಣನೀಯವಾಗಿ ಹೆಚ್ಚಬೇಕು. ಆಗ ಶಿಕ್ಷಕರ ದಿನಾಚರಣೆಯ ಆಚರಣೆ ಔಚಿತ್ಯಪೂರ್ಣವಾಗುತ್ತದೆ.

ಶಿಕ್ಷಕರ ದಿನಾಚರಣೆಯ ದಿವಸ ಶಿಕ್ಷಣ ಇಲಾಖೆ, ಸರ್ಕಾರ ಕೆಲವು ಮಂದಿ ಶಿಕ್ಷಕರನ್ನು ಆದರ್ಶ ಶಿಕ್ಷಕರೆಂದು ಗುರುತಿಸಿ ಅವರನ್ನು ಸನ್ಮಾನಿಸಿ ಗೌರವಿಸುತ್ತದೆ. ಈ ಸನ್ಮಾನಿತರು ಇತರೆ ಶಿಕ್ಷಕವೃಂದಕ್ಕೆ ಆದರ್ಶಪ್ರಾಯರಾಗ ಬೇಕೆಂಬ ನಂಬಿಕೆ ಇದೆ.

ಶಿಕ್ಷಕರ ದಿನಾಚರಣೆಯ ದಿವಸ, ಶಾಲೆಗಳಲ್ಲಿ ಗುರುವೃಂದದ ಬಗ್ಗೆ ಕವನ ರಚಿಸಿ ಹಾಡಿ, ವೇದೋಪನಿಷತ್ತು ಗಳ ಪಠನದ ಮೂಲಕ ಗುರುವನ್ನು ಹಾಡಿ ಕೊಂಡಾಡಿ, ಸಿಹಿ ಹಂಚಿ ಶುಭಾಶಯ ಕೋರುವ ವಿದ್ಯಾರ್ಥಿ ವೃಂದ, ಸ್ವಯಂ ಸೇವಾ ಸಂಸ್ಥೆಗಳು ಪ್ರಗತಿಪರ ಶಿಕ್ಷಕರನ್ನು ಗುರುತಿಸಿ ಸನ್ಮಾನ ಸಮಾರಂಭಗಳನ್ನು ಏರ್ಪಡಿಸುತ್ತವೆ. ಆದರೆ ಈ ಸನ್ಮಾನಗಳು ಲಭ್ಯವಾಗುವುದು ಪ್ರಗತಿಪರರಿಗೆ ಮಾತ್ರ. ನಿಷ್ಠೆಯಿಂದ, ಕರ್ತವ್ಯ ನಿರ್ವಹಿಸುವ ಶಿಕ್ಷಕರು ಅನೇಕ ವೇಳೆ ಗುರುತಿಸಲ್ಪಡುವುದಿಲ್ಲ. ಅಂತಹ ಸಹಸ್ರಾರು ಶಿಕ್ಷಕರಿಗೆ ಅವರ ವಿದ್ಯಾರ್ಥಿ ವೃಂದದ ಮಾನಸಿಕ ಪ್ರಾರ್ಥನೆ ಸಾಕಾಗುತ್ತದೆ. ಯಾಂತ್ರಿಕ ಬಹುಮಾನಗಳ ಅಗತ್ಯವಿಲ್ಲ. ಆದರೆ ಇಂತಹ ಸಮಾಜದ ನಿರ್ಮಾಪಕರಾದ, ರಾಷ್ಟ್ರ ನಿರ್ಮಾಪಕರಾದ ಶಿಕ್ಷಕರನ್ನು ವರ್ಷದಲ್ಲಿ ಒಂದು ದಿನ ಮಾತ್ರ ನೆನೆಸಿಕೊಂಡು ಗೌರವಿಸುವ ಪ್ರವೃತ್ತಿ ನಿಲ್ಲವೇಕು. ಶಿಕ್ಷಕರು ತಮ್ಮ ಸೇವೆಯ ಮೂಲಕ, ಕರ್ತವ್ಯದ ಮೂಲಕ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವುದರ ಮೂಲಕ ಗುರುತಿಸಿಕೊಳ್ಳಬೇಕು. ಶಿಕ್ಷಕರು ಕೆಲವು ವಿಶೇಷ ಗುಣಗಳನ್ನು ವೃದ್ಧಿಗೊಳಿಸಿಕೊಳ್ಳಬೇಕು. ಅವುಗಳಲ್ಲಿ ಕೆಲವನು ಮಾತ್ರ ಇಲ್ಲ ಪ್ರಸ್ತಾಪಿಸಲಾಗಿದೆ. **ಸ್ವಯಂ ಶಿಸ್ತು, ಜ್ಞಾನದಾಹ, ಕರ್ತವ್ಯನಿಷ್ಠೆ, ಸಮಯಪ್ರಜ್ಞೆ, ವೈಚಾರಿಕತೆ, ವೈಜ್ಞಾನಿಕ ಮನೋಭಾವ, ಸಂಯಮ, ಸಾಮಾಜಿಕ ಜವಾಬ್ದಾರಿ, ದೇಶಾಭಿಮಾನ, ಇವೆಲ್ಲಕ್ಕಿಂತ ಮಿಗಿಲಾಗಿ ತಮ್ಮ ಶಿಷ್ಯ ಸಮುದಾಯವನ್ನು ಸನ್ಮಾರ್ಗ ಕ್ಕೆಳೆಯುವ ಅಯಸ್ಕಾಂತದ ಶಕ್ತಿಯಾಗಬೇಕು.** ಶಿಕ್ಷಕರು ಸಾಮಾಜಿಕ ಬದಲಾವಣೆಯ ರೂವಾರಿಗಳಾಗಬೇಕು. ಈ ಮೇಲಿನ ಗುಣಗಳಿಲ್ಲದೆ ಇದ್ದರೆ, ಶಿಕ್ಷಕ ಯಾಂತ್ರಿಕತೆಗೆ ಮೊರೆ ಹೋಗಬೇಕಾಗುತ್ತದೆ. ಇದನ್ನು ರಾಷ್ಟ್ರಕವಿ ಕುವೆಂಪುರವರ ಮಾತಿನಲ್ಲಿ ಹೇಳುವುದಾದರೆ, ಹಿಂದೆ-ಮುಂದೆ ಗುರಿಯಿತ್ತು. ಹಿಂದೆ ಗುರುವಿದ್ದ ಮಂದಿ ಓಡುತ್ತಿದ್ದರು ಧೀರರ ಹಾಗೆ, ಇಂದು-ಮುಂದೆ ಗುರಿಯೂ ಇಲ್ಲ, ಹಿಂದೆ ಗುರುವೂ ಇಲ್ಲ, ಮಂದಿ ಓಡುತಿಹರು ಹೇಡಿಗಳ ಹಾಗೆ.

ತ್ರಿಕಾಲ ಜ್ಞಾನಿ ಅಲ್ಲಮಪ್ರಭು ಗುರುಶಿಷ್ಯರ ಸಂಬಂಧ ವನ್ನು ಈ ರೀತಿ ವ್ಯಾಖ್ಯಾನಿಸಿದ್ದಾರೆ. **'ತ್ರೇತಾಯುಗದಲ್ಲಿ ಗುರುಶಿಷ್ಯಂಗೆ ಬಡಿದು ಕಲಿಸಿದರೆ ವರಪ್ರಸಾದವೆಂದನಯ್ಯಾ, ದ್ವಾಪರ ಯುಗದಲ್ಲಿ ಗುರು ಶಿಷ್ಯಂಗೆ ಝುಂಕಿಸಿ ಕಲಿಸಿದರೆ ವರಪ್ರಸಾದವೆಂದನಯ್ಯಾ, ಕಲಿಯುಗದಲ್ಲಿ ಗುರುಶಿಷ್ಯಂಗೆ ವಂದಿಸಿ ಕಲಿಸಿದರೆ ವರಪ್ರಸಾದವೆಂದನಯ್ಯಾ,** ಅಲ್ಲಮಪ್ರಭು ವಿನ ಈ ನುಡಿಗಳು ಇಂದಿನ ಶೈಕ್ಷಣಿಕ ವ್ಯವಸ್ಥೆಗೆ ಕನ್ನಡಿ ಹಿಡಿದಂತಿವೆ. ಈ ವ್ಯವಸ್ಥೆಗೆ ನಾವೇ ಕಾರಣಕರ್ತರು. ನಮ್ಮ ಸಮಾಜದಲ್ಲಿ ಸಾಮಾನ್ಯವಾಗಿ ನಾಲ್ಕು ಗುಂಪಿನ ಶಿಕ್ಷಕರನ್ನು ಕಾಣುತ್ತೇವೆ. ಅವರೆಂದರೆ, ತತ್ತ್ವಸಹಿತ-ಸತ್ವರಹಿತ, ತತ್ತ್ವರಹಿತ- ಸತ್ವಸಹಿತ, ತತ್ತ್ವರಹಿತ-ಸತ್ವರಹಿತ, ಸತ್ವಸಹಿತ- ತತ್ತ್ವಸಹಿತ.

ಇಂದಿನ ಶಿಕ್ಷಕ ಸಮುದಾಯ ನಾಲ್ಕನೇ ಗುಂಪಿನ ಶಿಕ್ಷಕರಾಗ ಬಯಸಿದರೆ, ಆ ರೀತಿ ಸಂಕಲ್ಪ ಮಾಡಿದರೆ, ನಾವಿಂದು ಆಚರಿಸುವ ಶಿಕ್ಷಕರ ದಿನಾಚರಣೆ ಅರ್ಥಪೂರ್ಣ ವಾಗುತ್ತದೆ ಹಾಗೂ ಶಿಕ್ಷಕ ಸಮುದಾಯ ತಮ್ಮ ಹಿಂದಿನ ಸ್ಥಾನ, ಗೌರವ ಖಂಡಿತ ಪಡೆದುಕೊಳ್ಳುವುದರಲ್ಲಿ ಸಂಶಯವಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ, ಶಿಕ್ಷಕರ ದಿನಾಚರಣೆಯ ದಿವಸ ಉತ್ತಮೋತ್ತಮ ಪ್ರಾಧ್ಯಾಪಕ, ತತ್ತ್ವಜ್ಞಾನಿ ಡಾ॥ ಎಸ್. ರಾಧಾಕೃಷ್ಣನ್‌ರವರಿಗೆ ನಮ್ಮ ಶ್ರದ್ಧಾಂಜಲಿಯನ್ನು ಅರ್ಪಿಸಿ ದಂತಾಗಿ, ಶಿಕ್ಷಕರ ದಿನಾಚರಣೆಯ ಆಚರಣೆ ಔಚಿತ್ಯಪೂರ್ಣ ವಾಗುತ್ತದೆ. ಮುಂದಿನ ಪೀಳಿಗೆಗೆ ಇಂತಹ ಆಚರಣೆಗಳ ಅರ್ಥ ಮತ್ತು ಸಂದೇಶ ಸರಿಯಾಗಿ ತಿಳಿಯುತ್ತದೆ. ಶಿಕ್ಷಕರ ದಿನಾಚರಣೆ ಒಂದು ಯಾಂತ್ರಿಕ ಕ್ರಿಯೆಯಾಗದೆ ಅರ್ಥಪೂರ್ಣವಾಗುತ್ತದೆ ಎಂದು ನಂಬೋಣವೇ?

*

# ಗಾನ ಯೋಗಿ ಡಾ॥ ಪಂಡಿತ ಪುಟ್ಟರಾಜ ಗವಾಯಿಗಳು



ಸಂಗೀತ ಜಗತ್ತಿನ ಧೃವತಾರೆಯಾಗಿದ್ದ ಗಾನಯೋಗಿ ತ್ರಿಭಾಷಾ ಪಂಡಿತ ಪುಟ್ಟರಾಜ ಗವಾಯಿಗಳು ಕರ್ನಾಟಕದ ಅತ್ಯಮೂಲ್ಯ ತಪಸ್ವಿಗಳಾಗಿದ್ದರು. ಸ್ವತಃ ಅಂಧರಾಗಿದ್ದರೂ, ಸಾವಿರಾರು ಅಂಧಬಂಧುಗಳಿಗೆ ಬೆಳಕನ್ನು ಕೊಟ್ಟ ಕರುಣಾಳುವಾಗಿದ್ದರು. ಪದ್ಮಭೂಷಣ ಪ್ರಶಸ್ತಿ ಪುರಸ್ಕೃತರೂ, ರಾಜ್ಯೋತ್ಸವ, ಕಾಳಿದಾಸ ಸಮ್ಮಾನ್ ಮುಂತಾದ ಪ್ರಶಸ್ತಿಗಳನ್ನು ಅಲಂಕರಿಸಿದ್ದರು.

ಕನ್ನಡ, ಸಂಸ್ಕೃತ ಮತ್ತು ಹಿಂದಿ ಹೀಗೆ ತ್ರಿಭಾಷಾ ಪಂಡಿತರಾಗಿರುವ ಪುಟ್ಟರಾಜರು ಈ ಮೂರು ಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅಂಕಲಗಿ ಅಡವಿ ಸಿದ್ಧೇಶ್ವರ ಪುರಾಣ, ಕಲಬುರ್ಗಿ ಶರಣ ಬಸವೇಶ್ವರ ಪುರಾಣ, ಹಾವೇರಿ ಶಿವಬಸವ ಸ್ವಾಮಿ ಪುರಾಣ, ಅಕ್ಕಮಹಾದೇವಿ ಪುರಾಣ, ಶಿವಲಿಂಗೇಶ್ವರ ಪುರಾಣ, ಗಂಜೀಗಟ್ಟಿ ಚರಮೂರ್ತೇಶ್ವರ ಪುರಾಣ, ಯೋಗಿರಾಜ ಪುರಾಣ, ತ್ರಿಷಷ್ಠಿ ಪುರಾತನರ ಪುರಾಣ, ಗುಳೇದ ಗಾದಿಲಿಂಗೇಶ್ವರ ಪುರಾಣ, ಗುರುಸಿದ್ದೇಶ್ವರ ಪುರಾಣ, ವೀರಭದ್ರೇಶ್ವರ ಪುರಾಣ, ಮುಂಡರಗಿ ಅನ್ನದಾನೇಶ್ವರ ಪುರಾಣ, ಹೇಮರೆಡ್ಡಿ ಮಲ್ಲಮ್ಮ ಪುರಾಣ, ಗುಡ್ಡಾಪುರ ದಾನಮ್ಮದೇವಿ ಪುರಾಣ, ಚಿಕೇನಕೊಪ್ಪದ ಚೆನ್ನವೀರ ಶರಣರ ಪುರಾಣ, ನಾಲ್ವತಗಾಡ ವೀರೇಶ್ವರ ಶರಣರ ಪುರಾಣ, ಕನ್ನಡದಲ್ಲಿ ಇವರು ರಚಿಸಿದ ಪ್ರಮುಖ ಪುರಾಣಗಳು. ಬಸವೇಶ್ವರ ಪುರಾಣ, ಸಿದ್ಧಲಿಂಗ ವಿಜಯ ಪುರಾಣ, ಸಿದ್ಧಾಂತ ಶಿಖಾಮಣಿ, ಕುಮಾರ ಮಹಾಶಿವಯೋಗಿ, ಗುರು ಪಂಚಾಕ್ಷರ ಶಿವಯೋಗಿ ಚರಿತ್ರೆಗಳು ಹಿಂದಿಯಲ್ಲಿ ರಚಿಸಿದ ಕೃತಿಗಳು. ಶ್ರೀಮದ್ ಕುಮಾರಗೀತ, ಲಿಂಗಾಷ್ಟಕಂ, ಪಂಚಾಕ್ಷರ ಸುಪ್ರಭಾತಂ, ಶ್ರೀ ರುದ್ರ ತಾತ್ಪರ್ಯ, ಕುಮಾರ ವಿಲಾಸ ಕಾವ್ಯಂ, ಲಿಂಗ ಸೂಕ್ತಂ ಸಂಸ್ಕೃತದಲ್ಲಿ ರಚಿಸಿದ ಕೃತಿಗಳು.

ಪ್ರಸಾದಿಗಳಾಗಿದ್ದ ಶ್ರೀ ಪುಟ್ಟರಾಜ ಗವಾಯಿಗಳು ಯೋಗಿ ರಾಜರೆನಿಸಿ ಸೇವಾದಿಗಂತವನ್ನು ವಿಸ್ತರಿಸುತ್ತ ಬಂದಿದ್ದರು. ಗುರು ತೋರಿದ ಹಾದಿಯಲ್ಲಿ ಮುನ್ನಡೆದು ಅಸಂಖ್ಯ ಸಂಗೀತ ವಿದ್ವಾಂಸರುಗಳನ್ನು ಸಮಾಜಕ್ಕೆ ನೀಡಿದ್ದರು. ಶ್ರೀ ಗವಾಯಿಗಳು ಲಿಂಗಯೋಗದಲ್ಲಿ ಆನಂದವನ್ನು ಅನುಭವಿಸುತ್ತಿದ್ದ ಅಪರೂಪದ ಮಹಾನುಭಾವರಾಗಿದ್ದರು. ಗದುಗದ ಶ್ರೀ ವೀರೇಶ್ವರ ಪುಣ್ಯಾಶ್ರಮದ ಜೀವ ಜೀವಾಳುವಾಗಿ ರೂಪಿಸಿ ನಾಡಿಗೆ ಕೊಡುಗೆಯಾಗಿ ನೀಡಿದ ಪುಣ್ಯಶ್ರೇಷ್ಠರು.

ಗವಾಯಿಯವರು ಸಾರಂಗಿ, ಪಿಟೀಲು, ವೀಣೆ, ಮೆಂಡೋಲಿಯನ್, ಸರೋದ್, ತಬಲಾ, ಹಾರ್ಮೋನಿಯಂ, ಸಂತೂರ್, ಸಿತಾರ್ ಮತ್ತಿತರ ವಾದ್ಯಗಳನ್ನು ಅತ್ಯಂತ ಸುಶ್ರಾವ್ಯವಾಗಿ ಹಾಗೂ ಲೀಲಾಜಾಲವಾಗಿ ನುಡಿಸುವುದರಲ್ಲಿ ನಿಪುಣರಾಗಿದ್ದರು.

ಶ್ರೀಗಳ ಅಗಲಿಕೆ ನಾಡಿನ ಸಂಗೀತ ಸಾಮ್ರಾಜ್ಯಕ್ಕೆ ತುಂಬಲಾಗದ ನಷ್ಟವಾಗಿದೆ. ಶ್ರೀ ಯೋಗಿಗಳ ಆತ್ಮಕ್ಕೆ ಚಿರಶಾಂತಿಯನ್ನು ದಯಪಾಲಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತಾ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.







# ಮಣ್ಣು ಪಾಲಾಗುತ್ತಿರುವ ಅನ್ನ

-ಈರಯ್ಯ ಕಿಲ್ಲೇದಾರ*

ಹನ್ನೆರಡನೇ ಶತಮಾನದಲ್ಲಿ ಶರಣ ಆಯ್ದಕ್ಕಿ ಮಾರಯ್ಯ ಕಾಳುಗಳನ್ನು ಆರಿಸಿ ತರುವ ಕಾಯಕ ಮಾಡುತ್ತಿದ್ದ. ಹೊಲದಲ್ಲಿ ಕಣಗಳಲ್ಲಿ, ಹಾದಿ ಬೀದಿಗಳಲ್ಲಿ ಕಾಳು ಎಲ್ಲೇ ಬೀಳಲಿ. ಒಂದೊಂದೇ ಕಾಳುಗಳನ್ನು ಉಗುರು ಹಚ್ಚಿ ಆರಿಸಿ(ಯ್ದು) ತರುತ್ತಿದ್ದ. ಹೀಗೆ ಆರಿಸಿ ತಂದ ಕಾಳುಗಳನ್ನೇ ಬೀಸಿ ಹಿಟ್ಟು ಮಾಡಿ ಇಲ್ಲವೇ ಕುದಿಸಿ, ರೊಟ್ಟಿ ಇಲ್ಲವೇ ಅನ್ನ ಮಾಡಿ ಅವನ ಹೆಂಡತಿ ಉಣಬಡಿಸುತ್ತಿದ್ದಳು. ಒಂದು ದಿನ ಬಸವಣ್ಣನವರು ಮಾರಯ್ಯನನ್ನು ಪರೀಕ್ಷೆ ಮಾಡಲೆಂದೇ ಅವನ ಬಾಗಿಲ ಸಮೀಪದಲ್ಲೇ ಬಹಳಷ್ಟು ಅಕ್ಕಿಯನ್ನು ಸುರಿದು ಬಂದಿದ್ದರು. ಅದನ್ನು ಕಂಡ ಮಾರಯ್ಯ ಅಕ್ಕಿಯನ್ನು ಬಳಿದು ಧೋತರದಲ್ಲಿ ಕಟ್ಟಿಕೊಂಡು ಹೋಗಿ ಹೆಂಡತಿಗೆ ಕೊಡುತ್ತಾನೆ. ಹೆಂಡತಿಗೆ ಆತ ಇಷ್ಟು ಬೇಗ ಬಂದಿರುವುದು ಆಶ್ಚರ್ಯಕರ ಎನಿಸಿತ್ತು. ಆತ ಒಂದೊಂದೇ ಕಾಳನ್ನು ಆರಿಸಿಕೊಂಡು ಬರಲು ಮಧ್ಯಾಹ್ನವಾಗುತ್ತಿತ್ತು. ಸುಲಭದ ಕೆಲಸವೆಂದು ಹಾಗೆ ಮಾಡಿದ್ದು ಹೆಂಡತಿಯ ಕೋಪ ನೆತ್ತಿಗೇರುವಂತೆ ಮಾಡಿತ್ತು. ಮತ್ಯಾರಾದರೂ ಆಗಿದ್ದರೆ ಸಂಭ್ರಮ ಪಡುತ್ತಿದ್ದರೇನೋ! **ಆಶೆಯೆಂಬುದು ಅರ ಸಂಗಲ್ಲದೆ...... ಈಸಕ್ಕಿಯಾಸೆ ನಮಗೇಕೆ?** ಎಂದು ಪ್ರಶ್ನಿಸುತ್ತಾಳೆ.

ಕಷ್ಟಪಡದೇ ಸ್ವಲ್ಪವೂ ಶ್ರಮ ಇಲ್ಲದೆ ಹೆಚ್ಚು ಅಕ್ಕಿಯನ್ನು ತಂದಿರುವ ಸಂಗತಿ ಅವಳ ಅಸಮಧಾನಕ್ಕೆ ಕಾರಣವಾಗಿತ್ತು. ಅದೂ ಅಲ್ಲದೆ ಅಂದು ಅವರಿಬ್ಬರು ಉಂಡು, ಎರಡು ಮೂರು ದಿನಗಳ ತನಕ ಉಣ್ಣಲು ಸಾಕಾಗುವಷ್ಟು ಅಕ್ಕಿ ತಂದಿರುವುದು ಅತಿಯಾಶೆಯ ಸಂಕೇತ ಆಗಿತ್ತು. ಆಶೆ ಎಂಬುದು ಅರಸರಿಗೆ ಸಹಜ. ನಾವು ಸಾಮಾನ್ಯ ಜನರು ಭಕ್ತರು ಇಷ್ಟೊಂದು ಅಕ್ಕಿಗೆ ಆಶೆ ಪಟ್ಟದ್ದು ಸರಿಯಲ್ಲ ಎಂದು ಗಂಡನಿಗೆ ಛೀಮಾರಿ ಹಾಕುತ್ತಾಳೆ. ನಾಳೆಗೆಂದು ನಾಡಿದ್ದು ಬೇಕೆಂದು ಸಂಗ್ರಹಿಸಿಡುವುದು ಶರಣ ತತ್ವಕ್ಕೆ ವಿರೋಧ. ಇಂದು ಉಂಡು ಉಳಿದದ್ದು ನಾಳೆಗೆ ತಂಗುಳ(ಹಳಸುವುದು) ಆಗುವುದು. ಅಂದಂದಿಗೆ ಬೇಕಾದಷ್ಟನ್ನೇ ದುಡಿದು ಸಂಪಾದಿಸಿ ಹೆಚ್ಚಾದದ್ದನ್ನು ದಾಸೋಹಕ್ಕೆ ಮಾಡಬೇಕು. ಇದು ಶರಣರ ಆದರ್ಶ. ಈ ಆದರ್ಶ ಕೇವಲ ಆಹಾರ ಧಾನ್ಯಗಳಿಗಷ್ಟೇ ಸೀಮಿತವಾಗದೆ ಹಣಕಾಸಿಗೂ ಅನ್ವಯಿಸಿದ್ದರಿಂದ ಸಮಾನತೆ ಸಮಾಜದಲ್ಲಿ ನೆಲೆಯೂರಲು ಸಾಧ್ಯ ಆಗಿತ್ತು.

ಇನ್ನೊಂದು ಉದಾಹರಣೆ ನಾನು ಸಣ್ಣವನಿದ್ದಾಗ ನಮ್ಮೂರಲ್ಲಿ ವಯೋವೃದ್ಧನೊಬ್ಬ ಇದ್ದ. ಆತ ಮನೆತನದಿಂದ ಬಡವನೇನಲ್ಲ. ಸ್ಥಿತಿವಂತನೇ ಆಗಿದ್ದ. ಆದರೂ ಆತನು ದಿನಾಲು ಹೊಲದಲ್ಲಿ ಕಣದಲ್ಲಿ, ಹಾದಿ ಬೀದಿಗಳಲ್ಲಿ ಬಿದ್ದ ಕಾಳನ್ನು ಆರಿಸಿ ತರುತ್ತಿದ್ದ. ಆತ ಇಳ ಹೊತ್ತಿನಲ್ಲಿ ಊಟ ಮಾಡುತ್ತಿದ್ದ. ಅವನನ್ನು ಕೆಲವರು 'ಕೋಳಿಯಂಗ ಕಾಳ ಆರಸತಾನು' ಎಂದು ವ್ಯಂಗ್ಯವಾಗಿ ಮಾತಾಡುತ್ತಿದ್ದರು. ಪ್ರತಿದಿನ ಬೆಳಿಗ್ಗೆ ಹೋದವನು ಮಧ್ಯಾಹ್ನವೇ ಮನೆಗೆ ಬರುತ್ತಿದ್ದ. ಕೊಯ್ದು ಮಾಡಿದ (ಹೆಕ್ಕಲು) ಹೊಲದಲ್ಲಿ ಸಾಲು ಹಿಡಿದು ಕುಳಿತು ಕಾಳು ಆರಿಸುತ್ತಿದ್ದ. ತೊಗರಿ, ಹುರುಳು, ಕಡಲೆ, ಕುಸುಬೆಗಳನ್ನು ಶೇಂಗಾ ಮತ್ತು ಅಲಸಂದೆ ಕಾಯಿಗಳನ್ನು ಆರಿಸುತ್ತಿದ್ದ. ಜೋಳದ ತೆನೆ, ಗೋಧಿಯ ಹೊಡೆಗಳನ್ನು ಆರಿಸಿ ತರುತ್ತಿದ್ದ.

ಮೇಲಿನ ಎರಡೂ ನಿದರ್ಶನಗಳನು ಆಹಾರ ಧಾನ್ಯಗಳನ್ನು ಆರಿಸಿ ಸಂಗ್ರಹಿಸುವುದು ಬೆಳೆಸಿದ ಕಾಳಿನಷ್ಟೇ ಮಹತ್ವದ ಕೆಲಸ. ಪ್ರತಿಯೊಂದು ಕಾಳೂ ಅಮೂಲ್ಯವಾದದ್ದು. ಕಾಳು ಕಾಳು ಕೂಡಿದಾಗಲೇ ರಾಶಿಯಾಗುವುದು. ಆಹಾರ ಧಾನ್ಯವನ್ನು ಬೆಳೆಸುವಷ್ಟೇ ಮಹತ್ವದ

* 'ಈನಿಂಕಿ', ಕವಿತಾ ಪ್ರಕಾಶನ, ಗುಡಿಕಟ್ಟಿ, ಅಂಚೆ ಕ್ರ 591 104. ಬೆಳಗಾವಿ ಜಿಲ್ಲೆ.

ಸಂಗತಿ ಬೆಳೆಸಿದ ಕಾಳನ್ನು ಉಳಿಸುವುದಾಗಿದೆ. ಹಸಿವಾದವಗೆ ಅನ್ನ ಸಿಗಬೇಕೆಂಬ ಉದಾತ್ತ ಧ್ಯೇಯ ಇಲ್ಲಿದೆ. ಶತ ಶತಮಾನಗಳಿಂದಲೂ ಆಹಾರ ಧಾನ್ಯಗಳನ್ನು ಕೆಡದಂತೆ ಸಂಗ್ರಹಿಸಿಡುವ ಹಗೇವು, ಕಣಜಗಳಂತಹ ಕಾಳಿನ ಉಗ್ರಾಣಗಳು ರೈತರ ಮನೆಗಳಲ್ಲಿ ಈಗಲೂ ಇವೆ. ಕಾಳು ಬಿದ್ದಿದ್ದರೆ ಅದನ್ನು ನೋಡಿ ಸುಮ್ಮನೆ ದಾಟಿ ಹೋಗುತ್ತಿರಲಿಲ್ಲ. ಅದರ ಮೇಲೆ ಕಾಲಿಡುವುದೆಂದರೆ ಅನ್ನದೇವರನ್ನು ತುಳಿದಂತೆ ಎಂಬ ಭಾವನೆ ಇತ್ತು. ಕಾಳು(ಆಹಾರ ಧಾನ್ಯಗಳು) ಅನ್ನದೇವರು ಆಗಿತ್ತು. ಅದೇ ರೀತಿ ಅನ್ನ ರೊಟ್ಟಿ, ಅಂಬಲಿ, ನುಚ್ಚು ಯಾವುದೇ ಇರಲಿ ಪ್ರಸಾದ ಎನಿಸಿತ್ತು. ಅದನ್ನು ಕೇಡು ಮಾಡುತ್ತಿರಲಿಲ್ಲ. 'ಹಸಿದವನಿಗೆ ಅನ್ನ ನೀಡುವುದು ತಮ್ಮ ಕರ್ತವ್ಯ' ಎಂಬ ನೀತಿ ಅವರಲ್ಲಿತ್ತು.

ಮೇಲಿನ ಎರಡೂ ಪ್ರಸಂಗಗಳು ಔಚಿತ್ಯಪೂರ್ಣವಾಗಿವೆ. ಇತ್ತೀಚೆಗೆ ಪತ್ರಿಕೆಗಳಲ್ಲಿ ಎರಡು ಸಂಗತಿಗಳು ನನ್ನ ಗಮನ ಸೆಳೆದವು. ಹರಿಯಾಣಾ ರಾಜ್ಯದ ಸಿರ್ಸಾ ಜಿಲ್ಲೆಯ ಪ್ರವಾಹದಿಂದಾಗಿ ೨ ಲಕ್ಷ ಚೀಲ ಗೋಧಿ ನೀರು ಪಾಲಾದ ವರದಿ. ಇನ್ನೊಂದು ಅಧಿಕ ಪ್ರಮಾಣದಲ್ಲಿ ಗೋಧಿ ಮತ್ತು ಭತ್ತ ಬೆಳೆವ ಉತ್ತರ ಭಾರತದ ಹಲವಾರು ರಾಜ್ಯಗಳಲ್ಲಿ ೩೪ ಸಾವಿರ ಟನ್ ಭತ್ತ ಮತ್ತು ಗೋಧಿ ಹಾಳಾಗಿರುವ ವರದಿ. ನುಸಿ, ಇಲಿ ಮತ್ತು ಹೆಗ್ಗಣಗಳಿಂದಲೂ ಗೋದಾಮುಗಳಲ್ಲಿದ್ದ ಆಹಾರ ಧಾನ್ಯ ಹಾಳಾಗುವುದು ಗಮನಾರ್ಹ ಸಂಗತಿ. ಕೋಟ್ಯಂತರ ಮೌಲ್ಯದ ಆಹಾರ ಧಾನ್ಯ ಕೊಳೆತು ಗಬ್ಬೆದ್ದು ನಾರುವಂತಾಗಿದೆ. ಪ್ರವಾಹದ ನೀರು ಗ್ರಾಮಗಳತ್ತ ಮುನ್ನುಗ್ಗುತ್ತಿರುವುದನ್ನು ಕಂಡು ಕಂಡೂ ಗೋದಾಮುಗಳ ಅಧಿಕಾರಿಗಳು ಗೋಧಿ ಹಾಳಾಗುವುದನ್ನು ತಡೆಯಲು ಮುಂದಾಗದೇ ಇದ್ದನ್ನು ಅಕ್ಷಮ್ಯ ಅಪರಾಧವೇ ಸರಿ.

ಪಡಿತರ ಚೀಟಿದಾರರಿಗೆ ಸಹಾಯಧನ ಕೊಟ್ಟು ಆಹಾರ ಧಾನ್ಯ ಖರೀದಿಸುವಂತೆ ಮಾಡುವುದಾಗಲಿ, ಆಮದು ಮಾಡಿಕೊಂಡು ಆಹಾರ ಧಾನ್ಯಗಳ ಅಭಾವ ನೀಗುವುದಾಗಲಿ, ರೈತರಿಗೆ 'ಹೆಚ್ಚು ಬೆಳೆಯಿರಿ' ಎಂದು ಅಷ್ಟಿಷ್ಟು ಸಹಾಯಧನ ಘೋಷಣೆ ಮಾಡುವುದಾಗಲಿ, ಇಂಥ ಯಾವುದೇ ಕ್ರಮಗಳು ಆಹಾರ ಭದ್ರತೆ ಒದಗಿಸಲಾರವು. ಇದೇ ಮಾತನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ದೇಶದಲ್ಲಿ ಆಹಾರ ಧಾನ್ಯಗಳ ಅಭಾವ ಇಲ್ಲವೇ ಇಲ್ಲ. ಬೆಳೆಸಿದ ಕಾಳನ್ನು ಉಳಿಸುವಲ್ಲಿ ಸಮರ್ಪಕವಾಗಿ ಹಂಚಿಕೆ ಮಾಡುವಲ್ಲಿ ಸರಕಾರ ಅಸಮರ್ಥವಾಗಿದೆ. ಆಹಾರ ಧಾನ್ಯಗಳನ್ನು ಸಂರಕ್ಷಿಸಲು ಸಾಧ್ಯವಾಗದಿದ್ದರೆ, ಹಸಿವಿನಿಂದ ಸಾಯುತ್ತಿರುವ ಜನರಿಗೆ ವಿತರಣೆ ಮಾಡಿರಿ. ಸುಮ್ಮನೇ ಆಹಾರ ಧಾನ್ಯಗಳನ್ನು ಹಾಳು ಮಾಡುವುದು ಸಮಾಜ ದ್ರೋಹ ಎಂದು ಸುಪ್ರೀಂಕೋರ್ಟ್ ಕೇಂದ್ರ ಸರಕಾರಕ್ಕೆ ಛೀಮಾರಿ ಹಾಕಿದೆ. ಸರಕಾರದ ಅಂದಾಜಿನಂತೆಯೇ ೧೪೦ ಲಕ್ಷ ಟನ್ ಆಹಾರ ಧಾನ್ಯಗಳನ್ನು ದಾಸ್ತಾನು ಮಾಡಲು ಗೋದಾಮುಗಳ ಅವಶ್ಯಕತೆ ಇದೆಯೆಂತೆ! ಇನ್ನು ಹಸಿದ ಹೊಟ್ಟೆಗಳು ?

*

**ಶ್ರೀವಾಣಿ**

ಒಂದು ಅಗುಳು ಅನ್ನದ ಹಿಂದೆ ಸಾವಿರಾರು ಜನರ ಶ್ರಮವಿರುತ್ತದೆ. ಅನ್ನವನ್ನು ಚೆಲ್ಲಬಾರದು. ಊಟದ ತಟ್ಟೆಯಲ್ಲಿ ಬಿಡಬಾರದು. ಅನ್ನವನ್ನು ಬ್ರಹ್ಮವೆಂದು ಗೌರವಿಸಿದ್ದಾರೆ. ಅದು ಪ್ರಸಾದ. ಪರಮಾತ್ಮನು ಅನುಗ್ರಹಿಸಿದ ಜೀವಚೈತನ್ಯಾಧಾರ ಧಾತು. ಪರಶಿವನ ಪರ್ಯಾಯ ರೂಪವೇ ಅನ್ನ. ಸಕಲಜೀವಿಗಳ ಪ್ರಾಣಾಧಾರ. ಅಂಥ ಅನ್ನವನ್ನು ಹಳಸಲು ಬಿಡಬಾರದು. ಪ್ರಸಾದ ಸಾಧನಗಳಾದ ಆಹಾರಧಾನ್ಯಗಳನ್ನು ಹುಳ ತಿನ್ನಲು ಬಿಡಬಾರದು, ಕೊಳೆಯದಂತೆ ಎಚ್ಚರ ವಹಿಸಬೇಕು.





## ಶ್ರೀಗಳು ಗೋಲ್ಡನ್ ಟೆಂಪಲ್ಲಿನಲ್ಲಿ

ಆಗಸ್ಟ್ ೧೬, ೨೦೧೦. ಪೂಜ್ಯ ಶ್ರೀಗಳವರು ಬೆಳಗಿನ ಆರುಘಂಟೆಗೆ ಶ್ರೀಮಠದಿಂದ ತಮಿಳುನಾಡಿನತ್ತ ಪ್ರಯಾಣ ಪ್ರಾರಂಭಿಸಿದರು. ಹೀಗೆಯೇ ಮೂರು ಕಾರುಗಳು, ಜೊತೆಗೆ ಒಂದು ಮಿನಿ ಬಸ್ಸು. ವೆಲ್ಲೂರು ಜಿಲ್ಲೆ ಸುಡಿಯಾಟ್ಟಂ ತಾಲ್ಲೂಕು ಕೇಂದ್ರಕ್ಕೆ ಪ್ರಯಾಣ. ಬೆಂಗಳೂರು-ಹೊಸೂರು-ಕೃಷ್ಣಗಿರಿ-ಆಂಬೂರು ಮಾರ್ಗ. ಗುಡಿಯಾಟ್ಟಮ್ ತಲುಪಿದಾಗ ಹತ್ತೂವರೆಯಾಗಿತ್ತು. ವೀರಶೈವ ಬಂಧುಗಳ ಬಿನ್ನಹ. ಬಸವೇಶ್ವರ ದೇವಾಲಯದ ಪ್ರಾರಂಭೋತ್ಸವ. ಶ್ರೀಗಳವರ ದಿವ್ಯಸಾನ್ನಿಧ್ಯ. ಹರಗುರು ಚರಮೂರ್ತಿಗಳ ಉಪಸ್ಥಿತಿ. ಗಣ್ಯಮಾನ್ಯರ ಸಹಕಾರ. ಭಕ್ತರ ಮಹಾಸಾಗರ. ಸಮಾರಂಭದಲ್ಲಿ ಸನ್ಮಾನ. ಭಕ್ತಿ ಸಮರ್ಪಣೆ. ಶ್ರೀಗಳವರ ದರ್ಶನಕ್ಕೆ ನೂಕುನುಗ್ಗಲು. ಸ್ವಯಂ ಸೇವಕರು ಅಸಹಾಯಕರಾದ ಪರಿಸ್ಥಿತಿ.

ಶ್ರೀ ಷಣ್ಮುಖಪ್ಪ ಮತ್ತಿತರ ಮುಖಂಡರ ಕೃತಜ್ಞತಾಪೂರ್ವಕ ಸೇವೆ. ಭಕ್ತರ ಮನೆಯಲ್ಲಿ ಶ್ರೀಗಳವರ ಶಿವಪೂಜೆ. ನೋಡಲು ಬಂದ ಸಹಸ್ರ ಬಂಧು ಭಗಿನಿಯರು. ಪ್ರಸಾದ ವಿತರಣೆ. ಫಲ ತಾಂಬೂಲ ವಿನಿಯೋಗ. ಅಪರಾಹ್ನ ಮೂರುವರೆ ಘಂಟೆ. ಅಲ್ಲಿಂದ ಗೋಲ್ಡನ್ ಟೆಂಪಲ್‌ನತ್ತ ಪಯಣ. ಇತ್ತತ್ತಾರು ಕಿಲೋಮೀಟರ್ ದೂರ ಮುಗಿಸಿ ಶ್ರೀಪುರಂ ತಲುಪಿದ ಸಂದರ್ಭ.

ಶ್ರೀ ಗೋಲ್ಡನ್ ಟೆಂಪಲ್ಲಿನ ವ್ಯವಸ್ಥಾಪಕರಿಂದ ಭಕ್ತಿಪೂರ್ವಕ ಸ್ವಾಗತ. ಶ್ರೀಗಳವರನ್ನು ವಿದ್ಯುತ್‌ಚಾಲಿತ ಟ್ರಾಲಿಯಲ್ಲಿ ಕುಳ್ಳಿರಿಸಿ ದೇವಾಲಯದತ್ತ ಕರೆದೊಯ್ಯಲಾಯಿತು. 'The Golden temple is situated in a 100 acre lush green landscape in the middle of a star shaped path, such that it absorbs maximum energy from the nature, that creates enormous peace and brings relaxation to the devotees who walks through the star path. Every devotee walking through the star path is blessed to read messages of truth and righteousness that enabled one to realise themselves and transform into powerful beings. with over 1.5 tonnes of gold used to create traditional Vedic style temple architecture. The Shri Laxshmi Narayani Gold temple is tipped to be the worlds largest golden temple and is one of the most visited holy shrines in the world.

ಒಂದು ನೂರು ಎಕರೆ ಪ್ರದೇಶದ ನಡುವೆ ದೇವಾಲಯ ಕಂಗೊಳಿಸುತ್ತದೆ, ಸುತ್ತ ಕಣ್ತಣಿಸುವ ಹಸಿರ ಹಾಸು. ಮಧ್ಯೆ ಸುಭಾಷಿತಗಳ ಜ್ಞಾನದೀಪ್ತಿ. ೧.೫ ಟನ್ ಚಿನ್ನ ಬಳಸಿ ನಿರ್ಮಿತವಾದ ಗೋಲ್ಡನ್ ಟೆಂಪಲ್. ಅಧಿ ದೇವತೆ ಶ್ರೀ ಲಕ್ಷ್ಮಿನಾರಾಯಣಿ. ದೇವಾಲಯದ ಸುತ್ತ ಸರ್ವ ತೀರ್ಥ ಸರೋವರ. ಪೂಜ್ಯ ಶ್ರೀಗಳವರನ್ನು ಪೂರ್ಣ ಕುಂಭದೊಡನೆ ಗರ್ಭಗೃಹದತ್ತ ಮಂಗಳವಾದ್ಯದೊಡನೆ ಭಕ್ತಿ ಶ್ರದ್ಧಾಪೂರ್ವಕ ವ್ಯವಸ್ಥಾಪಕ ಮುಖ್ಯರು, ಪ್ರಧಾನ ಅರ್ಚಕರು, ಪುರೋಹಿತರು ಸ್ವಾಗತಿಸಿದರು. ಪೂಜೆಗೈದರು. ಶ್ರೀಗಳವರನ್ನು ಗರ್ಭಗೃಹದೊಳಗೆ ಕರೆದುಕೊಂಡು ಹೋದರು. ಆರತಿಯೆತ್ತಿದರು. ಎಲ್ಲರಿಗೆ ಪ್ರಸಾದ ನೀಡಿದರು. ಭದ್ರತಾ ಸಿಬ್ಬಂದಿ ಶಿಸ್ತಿನಿಂದ, ಸಂಯಮದಿಂದ ಶ್ರೀಗಳವರನ್ನು ಅವರೊಡನೆ ಇದ್ದ ಭಕ್ತಾಧಿಗಳನ್ನು ಆತ್ಮೀಯವಾಗಿ ನಡೆಸಿಕೊಂಡರು. ಅಲ್ಲಿಂದ ಆಶ್ರಮದ ಅಧ್ಯಕ್ಷರಾದ ಶ್ರೀ ಶಕ್ತಿ ಅಮ್ಮ ಅವರ ಆಶ್ರಮಕ್ಕೆ ಕರೆದೊಯ್ದರು. ಉಭಯತ್ರರೂ ಆತ್ಮೀಯವಾಗಿ ಕುಶಲೋಪರಿ ನಡೆಸಿದರು. ಶ್ರೀಗಳವರಿಗೆ ಶಾಲು ಹೊದಿಸಿ ಸನ್ಮಾನಿಸಿ ಸಂತೋಷವ್ಯಕ್ತಪಡಿಸಿದರು. ಪುನಃ ಬರಬೇಕು ಎಂದು ಅರಿಕೆ ಮಾಡಿಕೊಂಡರು.

೧೦೩ ವರ್ಷವನ್ನು ಪೂರೈಸುತ್ತಿರುವ ಸಂದರ್ಭದಲ್ಲಿಯೂ ಪೂಜ್ಯ ಶ್ರೀ ಶ್ರೀಗಳವರು 'ನಡೆದಾಡುವ ದೇವರಾಗಿ' ತಮಿಳುನಾಡಿನ ವೆಲ್ಲೂರು ಜಿಲ್ಲೆಯ ಆಸ್ತಿಕ ಬಂಧುಗಳಿಗೆ ದರ್ಶನಕೊಟ್ಟು ಶ್ರೀಮಠದತ್ತ ಪ್ರಯಾಣ ಬೆಳೆಸಿದಾಗ ಸಂಜೆ ಆರು ಘಂಟೆಯಾಗಿತ್ತು. ಶ್ರೀಮಠ ತಲುಪಿದಾಗ ರಾತ್ರಿ ಒಂಭತ್ತು ಘಂಟೆಯಾಗಿತ್ತು.

ತಮಿಳುನಾಡಿನ ಕಾರ್ಯಕ್ರಮದ ಪ್ರಾಯೋಜಕರಾದ ಶ್ರೀ ಷಣ್ಮುಖಪ್ಪ, ಶ್ರೀ ಬ್ಯಾಲಕೆರೆ ಜಯಣ್ಣ ಮತ್ತಿತರನ್ನು ಈ ಸಂದರ್ಭದಲ್ಲಿ ಸಿದ್ಧಗಂಗಾ ಸ್ಮರಿಸಲು ಸಂತೋಷಿಸುತ್ತದೆ.

**ವರದಿ: ಹೆಚ್.ವಿ. ವೀರಭದ್ರಯ್ಯ**




# ಸಂಭ್ರಮದ ಸ್ವಾತಂತ್ರ್ಯಕ್ಕೆ ಸಾಧನೆಗಳ ಸಾರಥ್ಯ



ಬಡತನ, ಅನಕ್ಷರತೆ ಮತ್ತು
ಅಸಮಾನತೆಯಿಂದ ಮುಕ್ತಿಯೇ
ನಿಜವಾದ ಸ್ವಾತಂತ್ರ್ಯ – ಗಾಂಧೀಜಿ

ನಮ್ಮ ಸ್ವತಂತ್ರ ಭಾರತಕ್ಕೀಗ 63 ವರ್ಷಗಳು, ಅದಕ್ಕೂ ಮುಂಚೆ ದಾಸ್ಯದ ಸಂಕೋಲೆಗೆ ಸಿಲುಕಿದ್ದ ಈ ಭವ್ಯ ಭಾರತವನ್ನು 'ಸಾರ್ವಭೌಮ ಸ್ವತಂತ್ರ ರಾಷ್ಟ್ರ'ವನ್ನಾಗಿ ರೂಪಿಸಿದ ಕೀರ್ತಿ ಮಹಾತ್ಮಾಗಾಂಧಿ, ಭಗತ್‌ಸಿಂಗ್, ಕಿತ್ತೂರುರಾಣಿ ಚೆನ್ನಮ್ಮ, ಸುಭಾಷ್‌ಚಂದ್ರ ಬೋಸ್, ಪಂಡಿತ್ ನೆಹರು, ಝಾನ್ಸಿರಾಣಿ ಲಕ್ಷ್ಮಿಭಾಯಿ, ಸಂಗೊಳ್ಳಿ ರಾಯಣ್ಣ ಅವರಂತಹ ಅಸಂಖ್ಯಾತ ದೇಶಭಕ್ತರಿಗೆ ಸಲ್ಲುತ್ತದೆ. ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ ಈ ಮಹಾನ್ ಚೇತನಗಳ ತನು, ಮನ, ಧನ ಮತ್ತು ತ್ಯಾಗ ಬಲಿದಾನಗಳ ಅಮರ ಜ್ಯೋತಿಯ ಬೆಳಕಲ್ಲಿ ಭಾರತದ ತ್ರಿವರ್ಣ ಧ್ವಜ ರಾರಾಜಿಸುತ್ತಿದೆ. ಸತ್ಯ, ಅಹಿಂಸೆ, ಸೌಹಾರ್ದತೆಗಳಿಗೆ ಸ್ಫೂರ್ತಿಯ ಸೆಲೆಯಾಗಿರುವ ನಮ್ಮ ಸ್ವಾತಂತ್ರ್ಯೋತ್ಸವದ ಈ ಸುದಿನದಂದು ಆ ಎಲ್ಲ ದಿವ್ಯ ಚೇತನಗಳಿಗೆ ಗೌರವ ನಮನ ಸಲ್ಲಿಸೋಣ. ಸ್ವಾತಂತ್ರ್ಯದ ಮಹತ್ವವನ್ನು ಅರಿತು ನಾಡನ್ನು ಅದ್ಭುತ ಅಭಿವೃದ್ಧಿಯತ್ತ ಮುನ್ನಡೆಸೋಣ.

**ರೈತರಿಗೆ ನೆರವು** ಶೇ. 3ರ ಬಡ್ಡಿ ದರದಲ್ಲಿ ರೈತರಿಗೆ, ನೇಕಾರರಿಗೆ, ಮೀನುಗಾರರಿಗೆ ಸಹಕಾರ ಸಂಘಗಳಿಂದ ಸಾಲ ಸೌಲಭ್ಯ. ವಾಣಿಜ್ಯ ಬ್ಯಾಂಕುಗಳಿಂದ ಶೇ. 3ರ ಬಡ್ಡಿ ದರದಲ್ಲಿ ಬೆಳೆ ಸಾಲ ವಿತರಣೆ. ಕ್ಷೀರ ಪ್ರೋತ್ಸಾಹ. – ಪ್ರತಿ ಲೀಟರ್ ಹಾಲಿಗೆ 4.50 ರೂ ಪ್ರೋತ್ಸಾಹ ಧನ. ಮೀನುಗಾರರಿಗೆ ಉತ್ತೇಜನ. ಹೈನುಗಾರಿಕೆ ಅಭಿವೃದ್ಧಿಗಾಗಿ ಯೋಜನೆಯಡಿ ಮೀನುಮರಿ ಉತ್ಪಾದನೆಗಾಗಿ 2.50 ಕೋಟಿ ರೂ. ವೆಚ್ಚ. ಒಳನಾಡು ಮೀನುಗಾರಿಕೆ ಅಭಿವೃದ್ಧಿ ಬೈಂದೂರಿನ ಕೊಡೇರಿ ಮೀನುಗಾರಿಕೆ ಬಂದರಿನ ಅಭಿವೃದ್ಧಿಗಾಗಿ 10 ಕೋಟಿ ರೂ. ನೀಡಿಕೆ.

**ಶಿಕ್ಷಣಕ್ಕೆ ಮಹತ್ವ** :6,700 ವಿದ್ಯಾರ್ಥಿಗಳಿಗೆ 1.50 ಕೋಟಿ ರೂ. ಸಂಚಿ ಹೊನ್ನಮ್ಮ ಮತ್ತು ಸರ್. ಸಿ.ವಿ. ರಾಮನ್ ವಿದ್ಯಾರ್ಥಿ ವೇತನ ನೀಡಿಕೆ. 2821 ಪ್ರೌಢಶಾಲಾ ಮತ್ತು 4928 ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕ.

**ಉನ್ನತ ಶಿಕ್ಷಣ** : ಉನ್ನತ ಶಿಕ್ಷಣ ಸಾಲದ ಬಡ್ಡಿಗೆ ಸಹಾಯಧನ. 2 ಕೋಟಿ ರೂ. ಬಿಡುಗಡೆ. 2385 ಪದವಿಪೂರ್ವ ಉಪನ್ಯಾಸಕರ ನೇಮಕಾತಿ. ವಿಜಾಪುರದ ಕರ್ನಾಟಕ ಮಹಿಳಾ ವಿವಿಯಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ 5 ಕೋಟಿ ರೂ. ನೀಡಿಕೆ.

**ಆರೋಗ್ಯ ಸಂಜೀವಿನಿ** : ಗ್ರಾಮೀಣ ಜನರಿಗಾಗಿ ಆರೋಗ್ಯ ಕವಚ-108 ಯೊಜನೆ ಜಾರಿ. ಉತ್ತರ ಕರ್ನಾಟಕದ 6 ಜಿಲ್ಲೆಗಳ 14.5 ಲಕ್ಷ ಬಿಪಿಎಲ್ ಕುಟುಂಬಗಳಿಗೆ 2 ಲಕ್ಷ ರೂವರೆಗೆ ಉಚಿತ ಚಿಕಿತ್ಸೆ. ಶಸ್ತ್ರಚಿಕಿತ್ಸೆಗಾಗಿ 'ವಾಜಪೇಯಿ ಆರೋಗ್ಯಶ್ರೀ ಯೋಜನೆ'ಗೆ ಚಾಲನೆ.

**ನಮ್ಮ ಮನೆಯ ಭಾಗ್ಯಲಕ್ಷ್ಮಿ** : ಭಾಗ್ಯಲಕ್ಷ್ಮಿ ಯೋಜನೆ ಅಂತಿಮ ಠೇವಣಿ ಮೊತ್ತ ರೂ. ಒಂದು ಲಕ್ಷಕ್ಕೆ 8 ಲಕ್ಷಕ್ಕೂ ಹೆಚ್ಚು ಹೆಣ್ಣು ಮಕ್ಕಳಿಗೆ ಪ್ರಯೋಜನ.

**ನಮ್ಮ ಜಲ ಮತ್ತು ಬಲ** : 52 ಭಾರೀ ಮತ್ತು ಮಧ್ಯಮ ನೀರಾವರಿ ಯೋಜನೆಗಳಿಗೆ 2689 ಕೋಟಿ ರೂ. ವೆಚ್ಚ. ತುಂಗಭದ್ರಾ ಎಡದಂಡೆ ನಾಲೆ ಹಾಗೂ ತುಂಗಭದ್ರಾ ಯೋಜನೆ ವಿತರಣೆ ನಾಲೆ ಆಧುನೀಕರಣಕ್ಕೆ 196 ಕೋಟಿ ರೂ. ವೆಚ್ಚ. 300 ಕೋಟಿ ರೂ. ವೆಚ್ಚದಲ್ಲಿ 29 ಕೆರೆಗಳ ಅಭಿವೃದ್ಧಿ. ಸಣ್ಣ ನೀರಾವರಿ ವಿಶ್ವ ಬ್ಯಾಂಕ್ ನೆರವಿನ ಜಲಸಂವರ್ಧನಾ ಯೋಜನೆಯಡಿ 319 ಕೋಟಿ ವೆಚ್ಚದಲ್ಲಿ 3877 ಕೆರೆಗಳ ಪುನರುಜ್ಜೀವನ. ಕಾಮಗಾರಿಗಳಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳಲು ಗುಣಮಟ್ಟ ನಿಯಂತ್ರಣ ಘಟಕ ಸ್ಥಾಪನೆ.

**ಸರ್ವರಿಗೂ**
**64ನೇ ಸ್ವಾತಂತ್ರ್ಯೋತ್ಸವದ**
**ಹಾರ್ದಿಕ ಶುಭಾಶಯಗಳು**
ಬಿ.ಎಸ್. ಯಡಿಯೂರಪ್ಪ
ಮುಖ್ಯಮಂತ್ರಿಗಳು

*ಅಭಿವೃದ್ಧಿಯೇ ಆಡಳಿತ ಮಂತ್ರ*



**ಕರ್ನಾಟಕ ವಾರ್ತೆ**

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ಶ್ರೀಮಠದಲ್ಲಿ ನಡೆದ ಗಣಪತಿ ವಿಸರ್ಜನ ಮಹೋತ್ಸವ ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ವೇದಿಕೆಯಲ್ಲಿ ಮಹಾತ್ಮಗಾಂಧೀಜಿಯವರ ಮೊಮ್ಮಗಳು ಶ್ರೀಮತಿ ಸುಮಿತ್ರ ಗಾಂಧಿ ಕುಲಕರ್ಣಿ, ಉದ್ಯಮಿ ಶ್ರೀ ರಾಚಪ್ಪ ಮೊದಲಾದವರು ಉಪಸ್ಥಿತರಿದ್ದರು




ಶ್ರೀಮಠದಲ್ಲಿ ಪರಮಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆದ ಶಿಕ್ಷಕರ ದಿನಾಚರಣೆ ಸಮಾರಂಭದಲ್ಲಿ ಸಂಸದ ಶ್ರೀ ಜಿ.ಎಸ್. ಬಸವರಾಜ್, ಚಿತ್ರದುರ್ಗ ಸಂಸದ ಶ್ರೀ ಜನಾರ್ದನಸ್ವಾಮಿ, ನಿವೃತ್ತ ಸಂಸ್ಕೃತ ಪ್ರಾಧ್ಯಾಪಕ ಶ್ರೀ ಶ್ರೀಧರ ಶಾಸ್ತ್ರಿ ಅವರು ಉಪಸ್ಥಿತರಿದ್ದರು



ತುಮಕೂರು ತಾಲ್ಲೂಕು ಬೆಳಧರ ಗ್ರಾಮದಲ್ಲಿ ಕೈಗಾರಿಕೆ ತರಬೇತಿ ಸಂಸ್ಥೆಯನ್ನು ಪರಮಪೂಜ್ಯ ಶ್ರೀಗಳವರು ಇತ್ತೀಚೆಗೆ ಲೋಕಾರ್ಪಣೆ ಮಾಡಿದರು.




ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ತುಮಕೂರು ಇವರು ಏರ್ಪಡಿಸಿದ್ದ "ಚಿಗುರು" ಕಾರ್ಯಕ್ರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು.




ಶ್ರೀಮಠದಲ್ಲಿ ನೂತನ ಶ್ರೀ ಸಿದ್ಧಗಂಗಾ ಇಂಗ್ಲೀಷ್ ಮಾಧ್ಯಮ ಪ್ರೌಢಶಾಲೆ ಪ್ರಾರಂಭೋತ್ಸವ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು



ಶ್ರೀಮಠದಲ್ಲಿ ನಡೆದ ಶ್ರೀ ಭಗವದ್ಗೀತಾ ಅಭಿಯಾನ ಕಾರ್ಯಕ್ರಮ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಇತ್ತೀಚೆಗೆ ನಡೆಯಿತು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604097